ವಿಜಯ ಗ್ರಂಥಮಾಲೆಯ ೩ನೆಯ ಕುಡಿ

# ಪ್ರತಿಫಲ ಮತ್ತು ಇತರ ಕಥೆಗಳು

ಬರೆದವರು

ಶ್ರೀಮತಿ ಜಯಲಕ್ಷ್ಮೀ ಆರ್. ಶ್ರೀನಿವಾಸನ್,

ಬೆಂಗಳೂರು.

ಸಂಪಾದಕರು : ಪ್ರೊ. ರಂ. ಶ್ರೀ. ಮುಗಳಿ, ಎಂ.ಎ., ಬಿ.ಟಿ.

ಮಾರಾಟಗಾರರು

ಕಥಾಕುಂಜ ಗ್ರಂಥ ಭಾಂಡಾರ

ಗಣಪತಿ ಪೇಟ, ಬೆಳಗಾಂವಿ

ಡಿಸೆಂಬರ ೧೯೪೪ ಬೆಲೆ ೧—೪—೦

*

# ಮುನ್ನುಡಿ

ಶ್ರೀಮತಿ ಜಯಲಕ್ಷ್ಮಿಯವರ ಸ್ವತಂತ್ರ ಕತೆಗಳ ಮೂರನೆಯ ಸಂಗ್ರಹವು ಇಲ್ಲಿ ಪ್ರಕಟವಾಗುತ್ತಿದೆ. ಈ ಕಥಾಮಂದಿರಕ್ಕೆ ಮುನ್ನುಡಿಯ ತೋರಣ ಕಟ್ಟಬೇಕೆಂದು ಅವರೂ ಪ್ರಕಾಶಕರೂ ಬಯಸಿದರು. ಸಂತೋಷದಿಂದ ಒಪ್ಪಿಕೊಂಡೆ.

ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಕಂತಿಯಿಂದ ಹೊನ್ನಮ್ಮನ ವರೆಗೆ ಹಲವು ಕವಯಿತ್ರಿಯರ ಹೆಸರನ್ನು ಹೇಳಿ, ಮಹಿಳೆಯರು ಕನ್ನಡನುಡಿಗೆ ಹೇರಳವಾದ ಕಾಣಿಕೆಯನ್ನು ಸಲ್ಲಿಸಿದ್ದಾರೆ ಎಂದು ನಾವು ಕೊಂಡಾಡುತ್ತೇವೆ. ಜನಪದ ಗೀತೆಗಳನ್ನು ಹಾಡಿ ಹೇಳಹೆಸರಿಲ್ಲದೆ ಹೋದ ಗರತಿಯರನ್ನು ಮನಸಾರೆ ಮೆಚ್ಚುತ್ತೇವೆ. ಹೊಸಕಾಲದಲ್ಲಿಯೂ ಹಲವು ಮಹಿಳೆಯರು ಕನ್ನಡಕ್ಕೆ ನೀಡಿದ ಮತ್ತು ನೀಡುತ್ತಿರುವ ಮುಡಿಪನ್ನು ನೋಡಿ ತಲೆದೂಗುತ್ತೇವೆ. ಒಂದೊಂದು ಸಲ ಗುಣದ ಪರಮಾಣುವನ್ನು ಪರ್ವತಮಾಡಿ ಲೋಕಕ್ಕೆಲ್ಲ ಸಾರುತ್ತೇವೆ. ಆದರೆ ಕಟುಸತ[illegible] ಮರೆಮಾಡಲಾಗದು. ನಮ್ಮ ನಾಡಿನ ಮಹಿಳೆಯರ ಪ್ರತಿಭೆ ಹೊರಹೊಮ್ಮಬೇಕಾದಷ್ಟು ಹೊಮ್ಮಿಲ್ಲ, ಪಡೆಯಬೇಕಾದಷ್ಟು ಕಾಂತಿಯನ್ನು ಪಡೆದಿಲ್ಲ. ಸಂಪ್ರದಾಯದ ದಿಗ್ಬಂಧನದಲ್ಲಿ ವ್ಯಕ್ತಿತ್ವ ಪರಿಪೋಷಣಹೊಂದದೆ ಇದ್ದ ಕಾರಣ, ಹಳಗಾಲದಲ್ಲಿ ಸ್ತ್ರೀ ಪ್ರತಿಭೆ ಹೆಚ್ಚಾಗಿ ಗುಪ್ತಸರಸ್ವತಿಯೇ ಆಯಿತು. ಇಂದು ಸಂಪ್ರದಾಯದ ಸಂಕೋಲೆ ಸಡಿಲುತ್ತಿದೆಯಾದರೂ ಶತಮಾನಗಳಿಂದ ನಡೆದು ಬಂದ ರೂಢಿ ನಷ್ಟವಾಗಿಲ್ಲ. ವಿದ್ಯಾಭ್ಯಾಸದ ಮಾರ್ಗವಾಗಿ ವ್ಯಕ್ತಿವಿಕಾಸಕ್ಕೆ ಹೆಚ್ಚಿನ ಸೌಕರ್ಯಗಳು ಇಂದು ಒದಗಿಬಂದಿವೆ; ಆದರೆ ವಿದ್ಯಾಭ್ಯಾಸವು ಬಹುಶಃ ಒಂದು ಆಭಾಸವಾಗಿ ಪರಿಣಮಿಸುತ್ತಿದೆ. ಸುಶಿಕ್ಷಿತರೆಲ್ಲಾ ಸುಸಂಸ್ಕೃತರೆಂದು ಹೇಳುವ ಧೈರ್ಯ ನಮಗಿಲ್ಲ. ವಿಕಾಸಹೊಂದಿದ ವ್ಯಕ್ತಿಗಳ ಬದಲು ಸ್ತ್ರೀ-ಪುರುಷರಿಬ್ಬರಲ್ಲಿಯೂ ಅಪಕ್ವವಿಚಾರದ ಪದವೀಧರರನ್ನು ಕಾಣುವುದೇ ಹೆಚ್ಚಾಗಿದೆ. ಇಂಥ ವಿಷಮಕಾಲದಲ್ಲಿ ಪರಿಸರವನ್ನು ಮೀರಿ ತಮ್ಮ ಪ್ರತಿಭೆಯನ್ನು

ತಾವೆ ನೀರೆರೆದು ಪೋಷಿಸಿ, ಕನ್ನಡಕ್ಕೆ ಕೃತಿಗಳನ್ನು ನೀಡುತ್ತಿರುವ ಕನ್ನಡಿತಿಯರನ್ನು ರಸಿಕವೃಂದವು ಸಂತೋಷದಿಂದ ಬರಮಾಡಿಕೊಳ್ಳಬೇಕು. ಈ ದೃಷ್ಟಿಯಿಂದ ಶ್ರೀಮತಿ ಜಯಲಕ್ಷ್ಮಿಯವರ ಈ ಸಂಕಲನಕ್ಕೆ ನಾನು ಸುಸ್ವಾಗತವನ್ನು ಬಯಸುತ್ತೇನೆ.

ಸಣ್ಣ ಕತೆಗಳ ರಚನೆಗೆ ಒಂದು ಸೂಕ್ಷ್ಮದೃಷ್ಟಿ, ತಂತ್ರದ ತಿಳಿವು, ಶೈಲಿಯ ಹದ ಬೇಕು. ರಸಪ್ರತೀತಿಗೆ ಭಂಗ ತಾರದಂಥ ಒಂದು ನಿಗ್ರಹವು ಅದರ ವ್ರತ. ನಡೆದ ಸಂಗತಿಯಲ್ಲಿಯ ಕಲೆಯಿರಲಿ, ಕಟ್ಟಿದ ಕತೆಯಿರಲಿ, ಎಲ್ಲವೂ ಒಮ್ಮೊನೆಯಾಗಿ ವೇಗದಿಂದ ಸಾಗಿ ತನ್ನ ಗುರಿ ಮುಟ್ಟಬೇಕು. ಕನ್ನಡದಲ್ಲಿ ಈಗ ಚಸ್ನಿಗೆ ಬರುತ್ತಿರುವ ಅನೇಕ ಕತೆಗಳಲ್ಲಿ ಸಣ್ಣ ಕತೆಯ ಸ್ವರೂಪದ ಅರಿವು ಸಾಕಷ್ಟು ತೋರುವುದಿಲ್ಲ. ಉದಯೋನ್ಮುಖ ಲೇಖಕರಿಗೆ ಇದು ಹೆಚ್ಚಾಗಿ ಅನ್ವಯಿಸುತ್ತದೆ. ಸಾಹಿತ್ಯ ರಚನೆಯ ಸಲುವಾಗಿ ಮಾಡಬೇಕಾದ ಸಾಧನೆಯಲ್ಲಿ ಸಣ್ಣ ಕತೆಯ ಜೀವಾಳವೇನೆಂಬುದನ್ನು ಓದಿನಿಂದಲೂ ಮನನದಿಂದಲೂ ತಿಳಿದುಕೊಳ್ಳುವುದು ಅವಶ್ಯವಾಗಿದೆ. ಸ್ತ್ರೀಯೆ ಇರಲಿ, ಪುರುಷನೆ ಇರಲಿ, ಸಂಸ್ಕಾರ ಹೊಂದದ ಪ್ರತಿಭೆ ಯಾರಿಗೂ ಭೂಷಣವಲ್ಲ.

ಶ್ರೀಮತಿ ಜಯಲಕ್ಷ್ಮಿಯವರು ಇಲ್ಲಿ ಸಂಗ್ರಹಗೊಳಿಸಿದ ಕತೆಗಳು ಕೌಟುಂಬಿಕ ಜೀವನಕ್ಕೆ ಸಂಬಂಧಪಟ್ಟವೆ. ಕುಟುಂಬ ಜೀವನದಲ್ಲಿ ಸ್ತ್ರೀಯು ಪಡೆಯುವ ಸಂತೋಷ, ತೋರುವ ಆಸೆ, ಎದುರಿಸುವ ಸಮಸ್ಯೆ ಇವೆಲ್ಲ ಇಲ್ಲಿಯ ವಿಷಯಗಳಾಗಿವೆ. ಅದರಲ್ಲಿಯೂ ಗೃಹಿಣಿ ಈ ಕತೆಗಳ ಕೇಂದ್ರವಾಗಿದ್ದಾಳೆ. ಬಡವರ ಬಗ್ಗೆ ಕನಿಕರ, ಪತಿಯ ಸಲುವಾಗಿ ತ್ಯಾಗ, ಒಡವೆಯ ಆಸೆ, ಪತಿಯ ಬಗ್ಗೆ ಸಂಶಯವೃತ್ತಿ, ಮಕ್ಕಳ ಹಂಬಲಿಕೆ ಈ ಮುಂತಾದ ಗೃಹಿಣಿಯ ಮನೋಧರ್ಮವನ್ನು ಶ್ರೀಮತಿಯವರು ಯಥಾವತ್ತಾಗಿ ಅರಿತಿದ್ದಾರೆ, ಸ್ವಾನುಭವದ ಎಳೆಗಳನ್ನು ಲೋಕಾನುಭವದಲ್ಲಿ ಒಂದುಗೂಡಿಸಿ ಕತೆಗಳನ್ನು ಹೆಣೆದಿದ್ದಾರೆ. ಮಹಿಳೆಯರ ಜೀವನವನ್ನು ಚಿತ್ರಿಸಲು ಮಹಿಳೆಯರ ನೋಟ, ಮಹಿಳೆಯರ ಲೆಕ್ಕಣಿಕೆ ಇವು ಎಷ್ಟು ಫಲಕಾರಿಯಾಗುತ್ತವೆ ಎಂಬುದಕ್ಕೆ ಇಲ್ಲಿಯ ಕತೆಗಳು ಸಾಕ್ಷಿಯಾಗಿವೆ. ಶ್ರೀಮತಿಯವರ ಕಥನ ಕಲೆಯನ್ನು 'ಪ್ರತಿಫಲ', 'ನಾನು ಕೊಂಡಾಡುವ ದೀಪಾವಳಿ', 'ಕ್ಷಮೆ', 'ಮೊಮ್ಮಗು', ಈ ಕತೆಗಳಲ್ಲಿ ಕಾಣಬಹುದು. ಎಲ್ಲ ಕಡೆಗೆ ಕಲೆಯ ಸಾಧನೆ ನೇರವಾಗಿ

ಕತೆ ಹೇಳುವುದರಲ್ಲಿ ತಲೆದೋರಿವೆ. ಈ ಸ್ವಾಭಾವಿಕತೆ ಇವುಗಳ ಮುಖ್ಯ ಗುಣ. ಕೊನೆವರೆಗೆ ಕುತೂಹಲವನ್ನು ಕಾಯ್ದುಕೊಂಡು ಮುಕ್ತಾಯದಲ್ಲಿ ಆಶ್ಚರ್ಯವನ್ನುಂಟುಮಾಡುವ ಕಲಾವಂತಿಕೆಯೂ ಇಲ್ಲಿ ತೋರದಿಲ್ಲ.

ಶ್ರೀಮತಿಯವರ ಕಥನಕಲೆ ಬೆಳೆಯುವುದಕ್ಕೆ ತುಂಬ ಅವಕಾಶವಿದೆ. ಬೆಳೆಯಬಹುದೆಂಬ ನಿರೀಕ್ಷೆಯೂ ಇದೆ. ಪರಿಪಕ್ವ ಪ್ರತಿಭೆಯ ಸ್ಫೂರ್ತಿ ಹೆಚ್ಚಿನ ಅನುಭವವನ್ನೂ ಕಲಾಸಾಧನೆಯನ್ನೂ ತನ್ನ ಬೆಳೆಯಾಗಿ ಕೇಳುವರೆ ತಪ್ಪೇನು? ಸದ್ಯಕ್ಕೆ, ಕತೆಗಾರ್ತಿಯ ಹುಟ್ಟುಗುಣವು ಶ್ರೀಮತಿಯವರಲ್ಲಿ ಇರುವುದೆಂಬ ಬಗ್ಗೆ ಸಂಶಯವಿಲ್ಲ. ಅಲ್ಲದೆ ಸಣ್ಣಕತೆಯ ಕಲೆ ಅವರ ಕೃತಿಗಳಲ್ಲಿ ಅರಳುತ್ತ ಸಾಗಿದೆ ಎಂಬ ಮಾತಿನ ಬಗ್ಗೆಯೂ ಸಂಶಯವಿಲ್ಲ. ಅವರ ನಿರೀಕ್ಷಣೆಗೂ ಅನುಭವಕ್ಕೂ ಒಂದು ತಿಳಿವೂ ವೇದನೆಯೂ ಹದವೂ ಪ್ರಾಪ್ತವಾಗಿ, ಕನ್ನಡಕ್ಕೆ ಅವರು ಮೇಲಾದ ಕೃತಿಗಳನ್ನು ನೀಡುವ ಯೋಗವು ಬರಲಿ; ಇಲ್ಲಿಯ ಕತೆಗಳನ್ನು ಸಹೃದಯರು ಪ್ರೀತಿಯಿಂದ ಸ್ವೀಕರಿಸಲಿ ಎಂದು ನನ್ನ ಹಾರೈಕೆ. ಸಹೃದಯರ ಮೆಚ್ಚುಗೆಯ ಮಾತಿನಂತೆ ಸ್ಪಷ್ಟೋಕ್ತಿಯ ವಿಮರ್ಶೆಯನ್ನೂ ಶ್ರೀಮತಿಯವರು ಸ್ವಾಗತಿಸಲಿ ಎಂದೂ ಹಾರೈಸುತ್ತೇನೆ.

ಕನ್ನಡದ ಅಜಸ್ರ ಸೇವಕರಾದ ಶ್ರೀ. ಪ್ಯಾಟಿ ಶಾಮರಾಯರ ಈ ವಿಜಯ ಗ್ರಂಥಮಾಲೆ ನಿರಂತರವಾಗಿ ನಡೆದು ಹೆಸರಿಗೆ ತಕ್ಕಂತೆ ವಿಜಯಶಾಲಿಯಾಗಲಿ ಎಂದು ಹೃತ್ಪೂರ್ವಕವಾಗಿ ಅದಕ್ಕೆ ಶುಭವನ್ನು ಬಯಸುತ್ತೇನೆ.

[illegible],<br>
[illegible].

ರಂ. ಶ್ರೀ. ಮುಗಳಿ



# ಪರಿವಿಡಿ

ಪುಟ

# ಸಂಪಾದಕರ ಅರಿಕೆ

ನಮ್ಮ ಮಾಲೆಯ ಮೊದಲ ಹೊತ್ತಿಗೆ–ದಾಸರ ಹುಡುಗೆ–ಯಲ್ಲಿ ಪ್ರಕಟಿಸಿದಂತೆ 'ಕ್ರಾಂತಿ'ಯು ಎರಡನೆಯ ಹೊತ್ತಿಗೆಯಾಗಿ ಹೊರಡಬೇಕಾಗಿತ್ತು. ಆದರೆ ಕಾಗದದ ಅಭಾವತೆಯು ಈ ಕಾಲವಲ್ಲಿ ಬಹು ದೊಡ್ಡದಾದ 'ಕ್ರಾಂತಿ'ಯು ಜನ್ಮ ತಾಳುವ ಪರಿಸ್ಥಿತಿಯೊದಗಿ ಬರಲಿಲ್ಲ. ಆದರ ಬದಲು ಈ 'ಪ್ರತಿಫಲ'ವೆಂಬ ಸಾಮಾಜಿಕ ಕಥಾಸಂಕಲವನ್ನು ಮಾಲೆಯ ಎರಡನೆಯ ಹೊತ್ತಿಗೆಯಾಗಿ ವಾಚಕರಿಗೆ ಅರ್ಪಿಸಿದ್ದೇವೆ. ಇದರಲ್ಲಿ ಕೌಟುಂಬಿಕ ಜೀವನಕ್ಕೆ ಸಂಬಂಧಿಸಿದ ೧೨ ಸ್ವತಂತ್ರ ಕತೆಗಳಿವೆ. ಇವನ್ನು ಬರೆದವರು ಬೆಂಗಳೂರಿನ ಶ್ರೀಮತಿ ಜಯಲಕ್ಷ್ಮೀ ಆರ್. ಶ್ರೀನಿವಾಸನ್‌ರು. ಶ್ರೀಮತಿಯವರು ಸಣ್ಣ ಕತೆಗಳನ್ನು ಬರೆಯುವ ಸ್ತ್ರೀ ಬರಹಗಾರರಲ್ಲಿ ಬಲ್ಲಿದರೆಂದು ಹೇಳಬಹುದು. ಇವರ ಹಲವು ಕಥಾಸಂಗ್ರಹಗಳು ಈಗಾಗಲೇ ಬೆಳಕಿಗೆ ಬಂದಿವೆ.

ಈ ಕಥಾಸಂಗ್ರಹಕ್ಕೆ ಬಳಸಿದ ಕಾಗದವು ಶ್ರೀಮತಿ ಜಯಲಕ್ಷ್ಮಿಯವರ ಪ್ರಯತ್ನದಿಂದ ಮೈಸೂರು ಪೇಪರಮಿಲ್ಲಿನಿಂದ ಸಗಲು ಬೆಲೆಗೆ ಸಿಕ್ಕಿದೆ. ಅದಕ್ಕಾಗಿ ಶ್ರೀಮತಿಯವರಿಗೆ ನಾವು ತುಂಬಾ ಉಪಕೃತರಾಗಿರುವೆವು. ಅದರಂತೆ 'ಮುನ್ನುಡಿ'ಯನ್ನು ದಯಪಾಲಿಸಿದ ಪ್ರೊ. ರಂಗನಾಥ–ಮುಗಳಿಯವರಿಗೂ, ಕರಡು ಪ್ರತಿಗಳನ್ನು ತಿದ್ದಿಕೊಟ್ಟ ಶ್ರೀ ಸಿ. ಕೆ. ವೆಂಕಟರಾಮಯ್ಯನವರಿಗೂ, ಪ್ರಕಟನೆಯ ಕಾರ್ಯಕ್ಕೆ ಧನಸಹಾಯ ಮಾಡಿದ ಕಾರವಾರದ ಶ್ರೀ ಜಿ. ಎಂ. ಮಾವಿನಕುರ್ವೆ ಮತ್ತು ಶ್ರೀ ಎನ್. ಕೆ. ದೀಕ್ಷಿತ ವಕೀಲರಿಗೂ, ಶ್ರೀ ಸಿ. ಎಸ್. ಕರ್ಬಿಯವರಿಗೂ, ಕಡ್ಲಬಾಳ ಶ್ರೀ ರಂಗರಾವ ದೇಸಾಯಿ ಮೊದಲಾದವರಿಗೂ ನಾವು ಅತ್ಯಂತ ಋಣಿಯಾಗಿರುವೆವು.

ನಾವಿರುವದು ಬೆಳಗಾವಿಯಲ್ಲಿ; ಇದು ಅಚ್ಚಾಗಿರುವುದು ಬೆಂಗಳೂರಿನ ಟೌನ್ ಪ್ರೆಸ್ಸಿನಲ್ಲಿ. ಹೀಗಾಗಿ ಪ್ರೂಫ್ ಕರೆಕ್ಷನ್ ಕೆಲಸವು ಸರಿಯಾಗಿ ನಡೆಯಲಲ್ಲಾದುದರಿಂದ ಹಲಕೆಲವು ಮುದ್ರಣ ದೋಷಗಳಾಗಿದ್ದರೆ ಸಹೃದಯರಾದ ವಾಚಕರು ಸರಿಪಡಿಸಿಕೊಂಡು ಓದುವ ಕೃಪೆ ಮಾಡಬೇಕಾಗಿ ಬೇಡಿಕೆ.

ವಿಜಯ ಗ್ರಂಥಮಾಲೆ
ಬೆಳಗಾವಿ

ಪ್ಯಾಟಿ ರಾಮರಾಯರು
ಸಂಪಾದಕರು

ಕಾರಿಕೆಯ ೩ನೆಯ ಹೊತ್ತಿಗೆ

# ನಾಗನ ಗೆಲುವು ಹಾಗೂ ಇತರ ಕವನಗಳು

ಜನ ಮೆಚ್ಚುಗೆ ಪಡೆದಿರುವ

ಸರಳ ರಗಳೆಯಲ್ಲಿ ಬರೆದ ಸುಂದರ ನಾಟಕ

ಅಲ್ಲದೆ ಹೊಸ ಹೊಸ ರಸಕವನಗಳು

ಬರೆದವರು : ಶ್ರೀ ಕೃಷ್ಣಮೂರ್ತಿ ಪುರಾಣಿಕ, ಬಿ.ಎ. (ಆನರ್ಸ್) ಬಿ.ಟಿ.

ಟೀಚರ, ಮುನಸಿಪಲ್ ಹೈಸ್ಕೂಲ, ಗೋಕಾಕ.

ಪ್ರೊ. ಗೋಕಾಕ ವಿನಾಯಕರಾಯರ ಮುನ್ನುಡಿಯೊಂದಿಗೆ

ಬೇಗನೇ ಪ್ರಕಟವಾಗುವುದು !

---

## ಬರಲಿರುವ ಪ್ರಕಟನೆಗಳು

೨ನೇ ವರುಷ ೧ನೆಯ ಹೊತ್ತಿಗೆ

# ಷೋಡಶಿ

ಶರತ್‌ಬಾಬುವಿನ ನಾಟಕದ ಅನುವಾದ

ಕಾದಂಬರಿ ರೂಪದಲ್ಲಿ ಬರಲಿದೆ !

ಅನುವಾದಕರು : ಶ್ರೀ ಗುರುನಾಥ ಜೋಶಿ

೨ನೆಯ ಹೊತ್ತಿಗೆ

# ಸೈರಂಧ್ರಿ ಮತ್ತು ಕೆಲವು ಕವನಗಳು

ಸರಳ ರಗಳೆಯಲ್ಲಿ ಬರೆದ ಸುಂದರವಾದ ವೀರಾವೇಶ ನಾಟಕ ಮತ್ತು

ಕೆಲವು ಸುಂದರ ಕವನಗಳು

ಬರೆದವರು : ಶ್ರೀ ಕೃಷ್ಣಮೂರ್ತಿ ಪುರಾಣಿಕ, ಬಿ.ಎ. (ಆನರ್ಸ್)

ಪ್ರೊ. ಮುಗುಳಿಯವರ ಮುನ್ನುಡಿಯೊಂದಿಗೆ

# ದಾಸರ ಹುಡುಗಿಯ ಬಗ್ಗೆ ಕೆಲವು ಅಭಿಪ್ರಾಯಗಳು

---

**ದಾಸರ ಹುಡುಗಿ :**—ಶ್ರೀ. ಟೇಂಗ್ಸೆ ಗೋವಿಂದರಾಯರು, ಬಿ. ಎ., ಎಲ್. ಎಲ್. ಬಿ. ಬೆಳಗಾವಿ. ವಿಜಯ ಗ್ರಂಥಮಾಲೆ—ಸಂಪಾದಕರು ಪ್ಯಾಟಿ ಶ್ಯಾಮರಾಯರು, ಬೆಳಗಾವಿ. ಕ್ರೌನ್ ೮/೫, ೧೧೨ ಪುಟ. ಬೆಲೆ ೧-೪-೦.

ಕಥಾಕುಂಜ ಗ್ರಂಥ ಭಾಂಡಾರದ ಒಡೆಯರಾದ ಶ್ರೀಮಾನ್ ಪ್ಯಾಟಿ ಶ್ಯಾಮರಾಯರು ಬಹು ದಿನಗಳಿಂದ ಕನ್ನಡ ಭಾಷಾಮಾತೆಯ ಸೇವೆಯಲ್ಲಿ ತೊಡಗಿ ಶ್ರಮ ವಹಿಸುತ್ತಿದ್ದಾರೆ. ಅವರ ಕಥಾಕುಂಜ ಮಾಸಪತ್ರಿಕೆಯು ಜನಸೇವೆಯಲ್ಲಿ ತೊಡಗಿ ಶ್ರಮಿಸಿದಂತೆಯೇ ವಿಜಯ ಗ್ರಂಥಮಾಲೆಯೂ ಹಲವು ಗ್ರಂಥಗಳನ್ನು ಪ್ರಕಟಿಸಿ ಕನ್ನಡಿಗರ ಗ್ರಂಥ ಭಾಂಡಾರಗಳನ್ನು ಅಲಂಕರಿಸಬೇಕೆಂಬುದು ಅವರ ಅಭಿಲಾಷೆ. ಸ್ತುತ್ಯ ಪ್ರಯತ್ನ.

ಶ್ರೀಮಾನ್ ಟೇಂಗ್ಸೆ ಗೋವಿಂದರಾಯರ ಕಥಾರಚನೆಯ ಕೌಶಲವು ಈಗಾಗಲೇ ಓದುಗರ ಮೆಚ್ಚುಗೆಯನ್ನು ಪಡೆದು, ಸೇವೆಗೆ ಸಿದ್ಧವಾಗಿರುವ ವಸ್ತು. ಈ ಚಿಕ್ಕ ಪುಸ್ತಕದಲ್ಲಿರುವ ಒಂದೊಂದು ಕಥೆಯೂ, ಅವರ ಲೇಖನ ಕಲೆಯ ಚಾತುರ್ಯವನ್ನು ಪ್ರದರ್ಶಿಸುತ್ತದೆ. ಶ್ರೀ ಬೇಂದ್ರೆಯವರು ತಮ್ಮ ಮುನ್ನುಡಿಯಲ್ಲಿ ಹೇಳಿರುವಂತೆ ಟೇಂಗ್ಸೆಯವರ ಕಥನ ಚಮತ್ಕೃತಿ, ಅವರ ದೃಷ್ಟಿಯ ವಿವಿಧ ದಿಶೆ, ಅವರ ವಿದ್ಯಾಪ್ರೀತಿ, ರಸಿಕತೆ, ಮಾರ್ಮಿಕತೆ, ನಾವೀನ್ಯ ಬುದ್ಧಿಯ ಪ್ರಗತಿಶೀಲ ದೃಷ್ಟಿ ಇವೆಲ್ಲವೂ ಅವರ ಒಂದೊಂದು ಕಥೆಯಲ್ಲೂ ಒಂದೊಂದು ಬಗೆಯಾಗಿ ರಂಜಿಸುತ್ತಿವೆ. ಕಥೆಗಳಲ್ಲಿ ನಾವೀನ್ಯತೆ ಪ್ರಗತಿಶೀಲ ದೃಷ್ಟಿಯಿದ್ದರೂ, ಅಪ್ರಾಸಂಗಿಕ ವಿಚಾರವಿಲ್ಲದೆ, ಅಶ್ಲೀಲ ಪದ [illegible] ಕಥೆಗಳು ಸ್ವಾರಸ್ಯವಾಗಿವೆ. ಶ್ರೀ ರಾಯರಿಂದ ಇನ್ನೂ ಈ ಬಗೆಯ ಹಲವು ಗ್ರಂಥರಚನಾ ಕಾರ್ಯವು ನಡೆದು ಭಾಷಾಸೇವೆಯು ಸಾಗಲೆಂದು ಆಶಿಸುತ್ತೇವೆ.

—ಸಂಪಾದಕ 'ಸುಬೋಧ' ಬೆಂಗಳೂರು.

**ದಾಸರ ಹುಡುಗಿ:**—(ಕಥಾಸಂಗ್ರಹ) ಲೇಖಕರು ಟೇಂಗ್ಸೆ ಗೋವಿಂದರಾಯರು, ಪ್ರಕಾಶಕರು ಪ್ಯಾಟಿ ಶ್ಯಾಮರಾಯರು, ವಿಜಯ ಗ್ರಂಥಮಾಲಾ, ಬೆಳಗಾವಿ. ಪುಟಗಳು ೧೧೨, ಬೆಲೆ ೧-೪-೦.

ಕರ್ನಾಟಕದ ಸುತ್ತ ಲೇಖಕರಲ್ಲೊಬ್ಬರಾದ ಶ್ರೀ ಟೇಂಗ್ಸೆ ಗೋವಿಂದರಾಯರು ಹಿಂದೊಮ್ಮೆ ಬರೆದ ಕಥೆಗಳ ಸಂಗ್ರಹವಿದು. ಉತ್ತಮ ಕಥೆಗಳನ್ನು ನೀಡಬಲ್ಲ ಶಕ್ತಿ

ಇವರಲ್ಲಿದೆ ಎಂಬುದು ಈ ಪುಸ್ತಕವನ್ನೋದಿದ ಎಲ್ಲರಿಗೂ ಕಂಡುಬರದಿರದು. "ಗಂಗೆಯ ಗುತ್ತಿಗೆ"ಯನ್ನು ಇಡೀ ಕರ್ನಾಟಕವೇ ಅರಿತಿದೆ. ದಾಸರ ಹುಡಿಗೆಯ ಚಿತ್ರವು ಸ್ಫುಟವಾಗಿದೆ. ದಾಸರ ಹುಡಿಗೆಯು ಸಿಥಿಲತೆಯಿಂದ ನಟಿಯಾಗಿ ಮನಸ್ಸಿನ ಪರಿಪಾಕಕ್ಕೆ ಅವಕಾಶವಿಲ್ಲದೆ ಹಳ್ಳಕ್ಕೆ ಬೀಳುತ್ತಾಳೆ. ಅವಳ ಬಗ್ಗೆ ಎಲ್ಲರಿಗೂ ಕೆಡ ಕೆನಿಸುತ್ತದೆ. "ಅಸತ್ಯ ನಾರಾಯಣ", "ಜಲಶಿಲ್ಪ" ಮನೋರಂಜಕವಾಗಿವೆ. "ಮಧು ಮತಿ"ಯಲ್ಲಿಯ ಕಲ್ಪನೆ ಅದ್ಭುತ ರಮ್ಯವಾಗಿದೆ.

ಭಾವಶಬ್ದಗಳೆರಡೂ ಒಂದಕ್ಕೊಂದು ಹೊಂದಿಕೊಂಡಿವೆ. ಇವರಿಂದ ಇನ್ನೂ ಹೆಚ್ಚಿನ ಕೃತಿಗಳನ್ನು ಅಪೇಕ್ಷಿಸುವದು ತಪ್ಪಾಗದು. ಶ್ರೀ ಟೇಂಗ್ಸೆಯವರು ತಮ ಸುಷುಪ್ತಿಯನ್ನು ತೊರೆದು ಕನ್ನಡ ನಾಡಿಗೆ ಒಳ್ಳೆಯ ಕಥೆಗಳನ್ನು ನೀಡಲಿ ಎಂದು ಹಾರೈಸುತ್ತೇವೆ. ಇಂಥ ಕಾಲದಲ್ಲಿ ಹೊಸ ಗ್ರಂಥಮಾಲೆಯನ್ನು ಪ್ರಾರಂಭಿಸಿದ ಶ್ರೀ ಪ್ಯಾಟಿಯವರ ಸಾಹಸವೂ ಅಭಿನಂದನೀಯ.

ಸಂಪಾದಕರು ಕರ್ಮವೀರ, ಹುಬ್ಬಳ್ಳಿ.

**ದಾಸರ ಹುಡುಗಿ:**—ಶ್ರೀ ಪ್ಯಾಟಿ ರಾಮರಾಯರ ಸಂಪಾದಕತ್ವದಲ್ಲಿ ಹೊರಡುತ್ತಿರುವ ವಿಜಯ ಗ್ರಂಥಮಾಲೆಯ ಮೊದಲ ಕುಡಿ. ಶ್ರೀ ಟೇಂಗ್ಸೆ ಗೋವಿಂದ ರಾಯರ ಹತ್ತು ಕತೆಗಳ ಸಂಕಲನ. ಶ್ರೀ ದ. ರಾ. ಬೇಂದ್ರೆ ಅವರ ಮುನ್ನುಡಿ. ಕಿರೀಟ ಅಷ್ಟಾಂಶ ೧೦+೧೦೪ ಪುಟಗಳು. ಬೆಲೆ ಒಂದೂವರೆ ರೂಪಾಯಿ.

ಜೀವನದ ಭಿನ್ನ ವಿಷಯಗಳನ್ನು ತಮ್ಮದೇ ಆದ 'ಬುದ್ಧಿಯ ನಾವಿನ್ಯ ಮತ್ತು ತಿಳಿಕತೆಯ ಚಮತ್ಕಾರ'ದಿಂದ ಉಲ್ಲೇಖಿಸಿದ ಜೀವಂತ ಕತೆಗಳಿವು. ತನ್ನ ಸ್ವೈರ್ಯದಿಂದ ಕೀರ್ತಿವಂತಳಾಗಿ ಮೆರೆದ 'ದಾಸರ ಹುಡುಗಿ', ಸಂಸಾರದಲ್ಲಿ ಸಂಶಯಭೂತದ ಚೇಷ್ಟೆಯನ್ನು ಸರಸವಾಗಿ ಚಿತ್ರಿಸಿರುವ 'ಕಣ್ಣುಮೋಲಿನ ಪರೆ', ಗಂಡುಹೆಣ್ಣಿನ ಸಹಜ ಪ್ರೇಮಕ್ಕೆ 'ಅಸತ್ಯ ನಾರಾಯಣ', ಸಮಾಜದ ಕುಂದನ್ನು ಎತ್ತಿ ತೋರಿಸುವ 'ಮಧುಮತಿ', 'ಕೆಸರು' ಇವು ಮೇಲ್ತರಗತಿಯ ಕತೆಗಳು.

ಕನ್ನಡದಲ್ಲಿ 'ಬೇಕೆ'ನಿಸಿರುವ ಈ ಕಾಲದಲ್ಲಿ ಗ್ರಂಥಮಾಲೆಯನ್ನು ಪ್ರಕಟಿಸಿದ ಸಾಹಸಕ್ಕಾಗಿ ಪ್ರಕಾಶಕರು ಅಭಿನಂದನೀಯರು.

—ಸಂಪಾದಕ, ಕತೆಗಾರ, ಬೆಂಗಳೂರು.

**ದಾಸರ ಹುಡುಗಿ:**—ವಿಜಯ ಗ್ರಂಥಮಾಲೆಯ ೧ನೆ ಕುಡಿ. ಸಂ. ಶ್ರೀ ಪ್ಯಾಟಿ ರಾಮರಾಯರು, ಬೆಳಗಾಂವಿ. ಕಿರೀಟ ಎಂಟನಾಂಶದ ಆಕಾರ ಪುಟಗಳು ೧೧೨. ಬೆಲೆ ೧-೮-೦. ಕತೆಗಾರರು ಶ್ರೀ ಟೇಂಗ್ಸೆಗೋವಿಂದರಾಯರು, ಬಿ.ಎ., ಎಲ್ಎಲ್.ಬಿ. ಬೆಳಗಾವಿ. ಶ್ರೀ ಕವಿವರ್ಯ ಬೇಂದ್ರೆಯವರ ಮುನ್ನುಡಿಯೊಡನೆ.

ಶ್ರೀ ಪ್ಯಾಟಿ ಶಾಮರಾಯರು ಕನ್ನಡಿಗರೆಲ್ಲರಿಗೂ ಚಿರಪರಿಚಿತರು. ಇವರು ಒಂದಾಣೆಯ ಗ್ರಂಥಮಾಲೆಯನ್ನು ಪ್ರಕಟಿಸುತ್ತಿದ್ದರು. ಅನಂತರ 'ಕಥಾಕುಂಜ' ಮಾಸಿಕವನ್ನು ಹೊರಡಿಸಿದರು. ಕಾಗದದ ಕೊರತೆಯ ಮೂಲಕ ಅವರು ಈ ವಿಜಯ ಗ್ರಂಥಮಾಲೆಯನ್ನು ಹೊರಡಿಸಹತ್ತಿರುವರು. ಈ ಗ್ರಂಥಮಾಲೆಯಲ್ಲಿ ವರ್ಷಕ್ಕೆ ೪ ಪುಸ್ತಕಗಳು ಹೊರಡುವವು. ನುಕ್ಯಂಡ ದಾಸರ ಹುಡುಗಿ ಈ ಗ್ರಂಥಮಾಲೆಯ ಗುಚ್ಛವು. ಇದರಲ್ಲಿ ೯೦ ಕಥೆಗಳಿರುವವು. ಮೊದಲನೆಯ ಕಥೆ 'ಗಂಗೆಯ ಗುತ್ತಿಗೆ'ಯನ್ನು ಬರೆದಕೂಡಲೇ ಅದರ ಕರ್ತೃಗಳಾದ ಶ್ರೀ ಬೆಂಗ್ರೆ ಗೋವಿಂದರಾಯರು ಶ್ರೀ ಬೇಂದ್ರೆಯವರು ಹೇಳಿದಂತೆ ಪ್ರಸಿದ್ಧಿಗೆ ಬಂದರು. ಈ ಕಥೆಗಳು ಓದಲಿಕ್ಕೆ ಮನೋಹರವಾಗಿವೆ. ಈ ಕಥೆಗಳನ್ನು ಒಟ್ಟಿಗೆ ತಂದು ಕನ್ನಡ ಸಾಹಿತ್ಯಕ್ಕೆ ಶ್ರೀ ಬೆಂಗ್ರೆಯವರು ಒಳ್ಳೆಯ ಕಾಣಿಕೆಯನ್ನು ಕೊಟ್ಟಿರುತ್ತಾರೆ. ಮಹಾರಾಷ್ಟ್ರ ಮೋಹಕ್ಕೆ ಬಿದ್ದಿರುವ ಬೆಳಗಾವಿಯಲ್ಲಿ ಕನ್ನಡತನಕ್ಕಾಗಿ ಮಡಿಯುತ್ತಿರುವ ಶ್ರೀ ಪ್ಯಾಟಿ ಶಾಮರಾಯರ ಈ ಉದ್ಯಮಕ್ಕೆ ಕನ್ನಡಿಗರೆಲ್ಲರೂ ನೆರವಾಗುವದು ಅವಶ್ಯಕ. ವಿಜಯ ಗ್ರಂಥಮಾಲೆಯು ಬಹುಕಾಲ ಬಾಳಲಿ.

—ಸಂಪಾದಕರು, ನವಸಂದೇಶ, ಬಳ್ಳಾರಿ.

---

# ಪ್ರತಿಫಲ

"ಏನೇ ಸೀತಾ, ನಿಮ್ಮ ಪಕ್ಕದ ಮನೆಗೆ ಬಹಳ ದಿನದಿಂದ ಬೀಗ ಹಾಕಿತ್ತಲ್ಲಾ. ಈಗ ಯಾರೋ ಒಕ್ಕಲು ಬಂದಿರುವಂತಿದೆ ? ಎಂದಳು ಲೀಲಾ.

"ಹೌದಮ್ಮ, ಬಂದಿದ್ದಾರೆ, ಅವರನ್ನೇನೆಂದು ಹೇಳಲಿ. ನಮ್ಮ ರಾಜುವನ್ನು ಕಟ್ಟಿ ಹಿಡಿಯುವುದಂತೂ ಸಾಕುಸಾಕಾಗಿ ಹೋಗಿದೆ, ನನಗೆ" ಎಂದಳು ಸೀತೆ ಜುಗುಪ್ಸೆಯೊಡನೆ.

"ಹಾಗಂದರೇನೇ ? ಅರ್ಥವಾಗಲಿಲ್ಲವಲ್ಲ !"

"ಅವರು ಬಂದಂದಿನಿಂದ ರಾಜುವಿಗೆ ಅಲ್ಲೇ ಕೆಲಸ. ಸದಾ ಸರ್ವದಾ "ಮಾವಿ ಮಾವಿ" ಎಂದು ಹೋಗಿ ಬಿಡುತ್ತಾನೆ. ನಾವು ಕೊಂಚ 'ಹೀಗೆ ಮಾಡಬೇಡ, ಹಾಗೆ ಮಾಡಬೇಡ' ಎಂದು ನಿರ್ಬಂಧಿಸುತ್ತೇವಲ್ಲವೆ. ಆ ದಂಪತಿಗಳಿಬ್ಬರೂ ಅವನನ್ನು ಬಹಳ ಮುದ್ದು ಮಾಡುತ್ತಾರೆ. "ಅವರ ಮುದ್ದಾಟದಲ್ಲಿ ಮಗು ಕೆಟ್ಟು ಹೋಗುತ್ತಾನೆ, ಅವನನ್ನಲ್ಲಿಗೆ ಕಳುಹಿಸಬೇಡ" ಎಂದು ದಿನಾ ನಮ್ಮ ಮನೇಲಿ ನನ್ನ ಮೇಲೆ ಕೋಪಿಸಿಕೊಳ್ಳುತ್ತಾರೆ........"

"ಬೈಗಳನ್ನೇಕೆ ಕೇಳಬೇಕು ? ಅವನನ್ನು ಕಳುಹಿಸದಿರು ......."

"ಅದು ಹೇಗಮ್ಮ ಸಾಧ್ಯ ? ಯಾವಾಗ್ಲೂ ಗಂಡಸರಿಗಿಂತ ನಮ್ಮ ಮನಸ್ಸು ಮೆದುವಲ್ಲವೆ ? ಪಾಪ, ಅವರಿಗೆ ಮಕ್ಕಳಿಲ್ಲ. ಆಕೆಗೆ ನಮ್ಮ ರಾಜು ಎಂದರೆ ಪ್ರಾಣ. ಅವನನ್ನು ಹೇಗೆ ಅವರ ಮನೆಗೆ ಹೋಗಬೇಡವೆಂದು ತಡೆಯಲಿ, ನನಗೆ ಮನಸ್ಸು ಬರಲಿಲ್ಲವಲ್ಲೇ." ಅಷ್ಟರೊಳಗಾಗಿ ಪಕ್ಕದ ಮನೆಯ ತರುಣಿ ರಾಜುವನ್ನು ಎತ್ತಿಕೊಂಡು ಅಲ್ಲಿಗೆ ಬಂದುಬಿಟ್ಟಳು. "ಸೀತಮ್ಮನವರೇ, ನಿಮ್ಮ ಹುಡುಗ ಬಲು ಜಾಣಕಣ್ರೀ. ಈ ಹೊತ್ತು ಟಿಫನ್‌ಗೆ ಸಜ್ಜಿಗೆ ಮಾಡಿದ್ದೆ. ಮಗು ಬೀದಿಯಲ್ಲಿ ಆಡುತ್ತಿದ್ದ. ಕರೆದು ಒಂದಿಷ್ಟು ಕೊಟ್ಟೆ. "ನನಗದು ಬೇಡ ಮಾವಿ, ನಿಮ್ಮ ಮನೆಲೆಲ್ಲ ಎಣ್ಣೆಯಲ್ಲಿ ತಿಂಡೀ ಮಾಡಿ

ರುವಿರಿ, ನನಗದು ಬೇಡ" ಎಂದ. "ನಿನಗೆ ಹ್ಯಾಗೋ ಗೊತ್ತು ಚಿನ್ನಾ ! ನಾನು ತುಪ್ಪದಲ್ಲೇ ಮಾಡಿದ್ದೇನೆ. ಸ್ವಲ್ಪವೇ ಸ್ವಲ್ಪ ತಕೋಮಾ" ಎಂದೆ. "ಅಮ್ಮಾನೇ ಆ ಹೊತ್ತು ಹೇಳಿದಳಲ್ಲ. ಇತರರ ಮನೆ ತಿಂಡೀ ತಿನ್ನಬಾರದು, ಎಣ್ಣೇಲಿ ಮಾಡಿಲ್ತಾರೆ. ನೈಗಾಗದು ಎಂದು ಎಂದ" ಎಂದು ಆತ್ಯಾಶ್ಚರ್ಯವೂ ಆನಂದವೂ ಕಲೆತ ಧ್ವನಿಯಲ್ಲಿ ಅನ್ನುತ್ತಾ ಮಗುವನ್ನು ಮುದ್ದಿಟ್ಟಳು.

"ಓ, ಚೋರ! ಎಂದೋ ಒಂದು ದಿನ ಅಂದಿದ್ದೆ. ಕಂಡವರ ಮನೆ ತಿಂಡಿ ತಿನ್ನಬೇಡವೆಂದು. ಇವನದನ್ನು ಇನ್ನೂ ನೆನಪಿನಲ್ಲಿಟ್ಟಿರುವನಲ್ಲಾ!" ಎಂದು ಹೆಮ್ಮೆಯಿಂದ ನುಡಿದಳು ಸೀತೆ. ಆ ಬಳಿಕ ಮೂವರೂ ಕೂಡಿ ಮಗುವನ್ನು ಮುದ್ದಾಡಲಾರಂಭಿಸಿದರು.

ಸೀತೆಯ ಮನೆಯ ನೆರೆಮನೆಯ ತರುಣಿಯ ಹೆಸರು ಲಲಿತೆ. ಲಲಿತೆಯ ಪತಿಯೊಬ್ಬ ಅಸಿಸ್ಟೆಂಟ್ ಇಂಜಿನಿಯರ್. ಒಂದು ವಾರದ ಕೆಳಗೆ ತಾನೆ ಮದರಾಸಿಗೆ ವರ್ಗವಾಗಿ ಬಂದು ಸೀತೆಯ ನೆರೆಮನೆಗೆ ಒಕ್ಕಲು ಬಂದರು ಆ ದಂಪತಿಗಳು. ಅವರು ದಾಂಪತ್ಯ ಜೀವನವನ್ನು ತೊಡಗಿ ಐದಾರು ವರ್ಷಗಳಾದರೂ ಇನ್ನೂ ಮಕ್ಕಳ ಭಾಗ್ಯವಿಲ್ಲದೆ ಬಹಳ ನೊಂದಿದ್ದರು. ಇಂಜಿನೀಯರ್ ಶೇಷಗಿರಿಗೆ ಮಕ್ಕಳೆಂದರೆ ಯಾವಾಗಲೂ ಬಹು ಆಸೆ, ಲಲಿತೆಗೂ ಹಾಗೆಯೇ. ಅವರಿಬ್ಬರೂ ತಮ್ಮ ಹೃದಯಾಂತರಾಳದಿಂದ ಹೊಮ್ಮಿ ಸುರಿಯುತ್ತಲಿದ್ದ ಪ್ರೇಮಾಮೃತವನ್ನೆಲ್ಲಾ ರಾಜುವಿಗೆ ಅಭಿಷೇಕ ಮಾಡುವುದರಲ್ಲೇನಾಶ್ಚರ್ಯ? ಶೇಷಗಿರಿ ಆ ಮನೆಗೆ ಒಕ್ಕಲು ಬಂದ ಮರುದಿನವೇ ಮಗು ರಾಜು ತನ್ನ ಮನೆಯ ಮುಂದೆ ಆಡುತ್ತಲಿರುವುದನ್ನು ಕಂಡು ಅವನನ್ನು ಕೂಗಿ ಕರೆದು ಮುದ್ದಾಡಲು ತೊಡಗಿಬಿಟ್ಟ. ಕ್ರಮೇಣ ಶೇಷಗಿರಿಗೂ, ಲಲಿತೆಗೂ ರಾಜುವು ದತ್ತುಪುತ್ರನಂತಾಗಿಬಿಟ್ಟ. ಸದಾಕಾಲವೂ ಅವರ ಮನೆಯಲ್ಲಿಯೇ ವಾಸ. ಲಲಿತ ಮಗುವಿಗೆ ರುಚಿರುಚಿಯಾದ ಭಕ್ಷ್ಯಗಳನ್ನು ತಯಾರಿಸಿ ಕೊಟ್ಟು, ತಲೆಬಾಚಿ, ಮುಖ ತೊಳೆದು, ತಿಲಕವಿಟ್ಟು, ಅಲಂಕರಿಸಿ ಮುದ್ದಾಡುವಳು. ಶೇಷಗಿರಿ ಪ್ರತಿನಿತ್ಯವೂ ಕಛೇರಿಯಿಂದ ಹಿಂತಿರುಗುವಾಗ ಮರೆಯದೆ ರಾಜುವಿಗಾಗಿ ಹೊಸಹೊಸ ತರಹದ ಆಟದ ಸಾಮಾನು, ಪೆಪ್ಪರ್‌ಮೆಂಟ್, ಚಾಕ್‌ಲೇಟ್, ಬಿಸ್ಕಟ್, ಏನಾದರೊಂದನ್ನು ದಿನಕ್ಕೊಂದು ವಿಧ ಕೊಂಡು ತರುವನು. ರಾಜುವಿನಿಂದ ಸೀತೆಗೇನ ಗಲಾಟೆ ಕಡಿಮೆಯಾದರೂ ಕೂಡ,

ಅವಳ ಪತಿ ಹೇಳುವಂತೆ ಮಗು ಈ ಮಿತಿಮೀರಿದ ಮುದ್ದಾಟದಲ್ಲಿ ಕೆಟ್ಟು ಹೋಗುವನೋ ಎಂದು ಮನಸ್ಸಿನೊಳಗೆ ಭಯ. ಈ ಮಧ್ಯೆ ಹಳ್ಳಿಯಿಂದ ಅವರ ಸೋದರತ್ತೆ ಬಂದಳು. ಇದೆಲ್ಲವನ್ನು ಕಂಡು, 'ಮನೆಗೊಂದು ಮಾಣಿಕ್ಯದಂತೆ ಹುಟ್ಟಿರುವ ಮಗು ಸದಾ ಕಂಡವರೊಬ್ಬರ ಮನೆಯಲ್ಲಿಯೇ ಸುಳಿಯುತ್ತಿರುವುದು ಸರಿಯಲ್ಲ' ಎಂದು ಖಂಡಿಸಿದಳು. ಸೀತೆ ಸಿಡುಕಿನಿಂದ "ಏನತ್ತೆ ನೀನು? ಸದಾಕಾಲ ಗೊಣಗುಟ್ಟುತ್ತಿರುವೆ! ಏನೇ ಪಾಪ, ಅವರಿಗೂ ಮಕ್ಕಳಿಲ್ಲ. ಮಗು ಅಲ್ಲಿ ಸ್ವಲ್ಪ ಆಟವಾಡಿಕೊಂಡು ಬಂದರೇನು ತಪ್ಪು?" ಎನ್ನುವಳು.

"ಇಲ್ಲಕಣೇ ಬಂಜೆಮುಟ್ಟಿದ ಮಗುವಿಗೆ ಏನೂ ದೋಷ ತಾಕದಿದ್ದರೆ ಸಾಕಮ್ಮಾ, ಅದೇ ನನಗೆ ಭಯ, ಇಲ್ಲದಿದ್ದರೆ ನನಗೇನಂತೆ ನಿನ್ನ ಪಾಡು" ಎಂದು ಒಂದು ಬಾಂಬನ್ನು ಹಾಕಿದಳು. ತಕ್ಷಣ ಸೀತೆಗೆ 'ಜುಂ' ಎಂದಿತು. ಆದರೂ ಹೊರಗಡೆಗೆ "ಹೋಗತ್ತೆ ನಿನಗೇನು ಕೆಲಸ. ಏನಾದರೊಂದು ಕುರುಡು ನಂಬಿಕೆ .." ಎಂದಲ್ಲಿಂದ ತಟ್ಟನೆ ಎದ್ದೇ ಬಿಟ್ಟಳು. ಆದರವಳ ಅಂತರಂಗದಲ್ಲಿ ಆ ಮಾತು ಒಳಗೊಳಗೇ ಕೆಲಸ ಮಾಡಲಾರಂಭಿಸಿತು.

"ಏನೋ ಯಾರಿಗೆ ಗೊತ್ತು; ನಮಗಿರುವುದು ಇದೊಂದು ಮಗು. ಅವನು ಚೆನ್ನಾಗಿರಬೇಕಲ್ಲ. ಅವನು ಅವರ ಮನೆಗೆ ಹೋಗುವುದರಿಂದ ತಡೆಯುವುದಕ್ಕೆ ಒಂದೇ ಒಂದು ಉಪಾಯ. ಈಗ ನಮ್ಮ ಮಹಿಳಾ ಸಮಾಜದಲ್ಲಿ ಶಿಶುವಿಹಾರ ಒಂದನ್ನು ಪ್ರಾರಂಭಿಸಿರುವರಲ್ಲಾ, ನಾಳೆಯೇ ಅವನನ್ನು ಕರೆದುಕೊಂಡು ಹೋಗಿ ಅಲ್ಲಿ ಅವನನ್ನು ಸೇರಿಸಿ ಬಿಡುತ್ತೇನೆ, ಅಷ್ಟೆ" ಎಂದು ತೀರ್ಮಾನಿಸಿಕೊಂಡಳು. ಅದೇ ರೀತಿಯಲ್ಲಿ ಆ ಸಂಜೆ, ಸೀತೆ ಪತಿಯ ಅನುಮತಿಯನ್ನೂ ಪಡೆದು, ಮರುದಿನ ರಾಜುವನ್ನು ಶಿಶುವಿಹಾರದಲ್ಲಿ ಸೇರಿಸಿ ಬಿಟ್ಟಳು. ಸಂಜೆ ಮಗು ಮನೆಗೆ ಬಂದೊಡನೆಯೇ, ತಿಂಡಿತೀರ್ಥವಾದ ಬಳಿಕ ಸೀತೆ ಅವನನ್ನೂ ಜೊತೆಗೆ ಕರೆದುಕೊಂಡು ಸಮಾಜಕ್ಕೋ, ಸ್ನೇಹಿತೆಯರ ಮನೆಗೋ, ಗುಡಿಗೋ ಹೋಗಿಬಿಟ್ಟು ಸೂರ್ಯಾಸ್ತಮಾನವಾದ ಬಳಿಕವೇ ಮನೆಗೆ ಹಿಂದಿರುಗುವಳು. ಬೆಳಗಿನ ಹೊತ್ತಿನಲ್ಲಿ ಮನೆಯ ಮೇಷ್ಟ್ರು ಸಿದ್ಧ! ಪಾಪ, ರಾಜುವಿಗೆ ಪಕ್ಕದ ಮನೆಗೆ ಹೋಗಲು ಸಮಯ ಸಿಕ್ಕುತ್ತಲೇ ಇರಲಿಲ್ಲ. ಒಂದೆರಡುಸಲ ಲಲಿತೆ ಸೀತೆಯನ್ನು ಸಂಧಿಸಿ "ಮಗುವನ್ನೇಕೆ ಈಚೆಗೆ ನಮ್ಮ

ಮನೆಗೆ ಕಳುಹಿಸುವುದೇ ಇಲ್ಲ. ಅವನಿಲ್ಲದೆ ನಮಗೆ ಬಲು ಬೇಜಾರಾಗಿಬಿಟ್ಟಿದೆ" ಎಂದು ಕೇಳಿದಳು. ಅದಕ್ಕೆ ಸೀತೆ "ಅವನ ತಂಟೆ ಸಹಿಸಲಾರದೆ ಶಿಶುವಿಹಾರಕ್ಕೆ ಸೇರಿಸಿದೆ ನೋಡಿ. ಅಂದಿನಿಂದ ಮಗುವಿಗೆ ಪಾಪ ಕೊಂಚ ಆಡುವುದಕ್ಕೂ ಸಹ ಸಮಯ ಇರುವುದಿಲ್ಲ. ಸಾಲದ್ದಕ್ಕೆ ಅವರ ತಂದೆ ಟ್ಯೂಷನ್ ಬೇರೆ ಇರಿಸಿ ಬಿಟ್ಟಿದ್ದಾರೆ. ಲಲಿತಮ್ಮ, ಮಗುವಿನ ಪೇಚಾಟ ಹೇಳತೀರದು. ಈಚೆಗೆ ಹೇಗೆ ತೆಳ್ಳಗಾಗಿಬಿಟ್ಟ ನೋಡಿದಿರಾ? (ಮನಸ್ಸಿನೊಳಗೆ ಬೇರೊಂದು ಕಾರಣ) ಅವನಂತೂ ನಿಮ್ಮ ಮನೆಗೆ ಹೋಗಬೇಕು ಹೋಗಬೇಕು ಎಂದು ನನ್ನನ್ನು ಪೀಡಿಸುತ್ತಿರುತ್ತಾನೆ. ನಾನೇನು ಮಾಡಲೀಂದ್ರೆ" ಎಂದು ಬುರುಡೆ ಬಿಟ್ಟಳು. ನಿಜವಾದ ಕಾರಣವನ್ನು ಲಲಿತೆ ಹೇಗೆ ತಿಳಿದಾಳು ಪಾಪ.

ಸ್ವಲ್ಪ ದಿನಗಳಿಗೆಲ್ಲ ಲಲಿತೆಗೆ ಏನೋ ಮೈ ಸರಿಯಿಲ್ಲವೆಂದು, ತೌರುಮನೆಗೆ ಹೊರಟು ಹೋದಳು. ಶೇಷಗಿರಿ ಸಹ ಯಾವುದೋ ಸ್ಪೆಷಲ್ ಡ್ಯೂಟಿ ನಿಮಿತ್ತ ನಾಲ್ಕೈದು ತಿಂಗಳಿಗೆ ಬೆಂಗಳೂರಿಗೆ ಹೊರಟುಹೋದ. ಅವರಿಬ್ಬರೂ ಊರಲಿಲ್ಲವೆಂಬ ಚಿಂತೆ ಮಗು ರಾಜುವಿನ ಮನಸ್ಸನ್ನು ಮಾತ್ರವೇ ಪೀಡಿಸಿತು. "ಅಮ್ಮಾ ಮಾಮಾ ಎಲ್ಲಿ? ಯಾವಾಗ ಬರುವರೇ? ಮಾವ ಎಲ್ಲಿಗೆ ಹೋದರೇ?" ಎಂದೆಲ್ಲ ತನ್ನ ತಾಯನ್ನು ಕೇಳುವನು. "ಅದೆಲ್ಲಿಗೆ ಹೋದರೋ ಯಾರಿಗೆ ಗೊತ್ತು? ಸುಮ್ಮನೆ ಪೀಡಿಸಬೇಡ. ಆಡಿಕೋ. ಹೋಗು" ಎಂಬಂತಹ ಉತ್ತರವೇ ರಾಜುವಿಗೆ ಸಿಕ್ಕುವುದು. ಆ ಚಿಂತೆ ಅವನ ತಾಯಿಗೆ ಲೆಕ್ಕವಿಲ್ಲದಿದ್ದರೂ ಆ ಮಗುವಿನ ಮನನ್ನು ಆ ಯೋಚನೆಯಿಂದ ಅದೆಷ್ಟೊಂದು ತಲ್ಲಣಿಸಿತೆಂಬುದನ್ನು ಆ ತಾಯಿ ಅರಿಯದೆ ಹೋದಳು. "ಮಾಮಾ, ಮಾವ ಎಲ್ಲಿ? ನಾನು ಅವರ ಮನೆಗೆ ಬರೋಲ್ಲಂತ ಕೋಪಿಸಿಕೊಂಡು ಊರಿಗೆ ಹೊರಟೋದರೇನು? ಥೂ, ಈ ಅಪ್ಪಾ, ಅಮ್ಮಾ, ಒಹಾ... ಆ–ಆ–ಆ–ಳ ಕೆಟ್ಟವರು. ನನ್ನನ್ನು ಅವರ ಮನೆಗೆ ಹೋಗೋಕೆ ಬಿಡೋಲ್ಲ....... ಊ ಹೂಂ—ಮಾಮಾ, ಮಾಮಾ ನಂಗೆ ತುಂಬ ತಿಂಡಿ, ಆಟದ ಸಾಮಾನೂ ಎಲ್ಲ ತರೋಕೆ ಊರಿಗೆ ಹೋಗಿದ್ದಾರೆ" ಎಂದೆಲ್ಲ ಆ ಮಗು ಯೋಚಿಸಿ ಯೋಚಿಸಿ ನೋಡುವನು.

ಅವನ ಯೋಚನೆಯಂತೆಯೇ ಮಾವನು ಒಂದು ದಿನ ಊರಿಗೆ ಹಿಂದಿರುಗಿ ಬಂದರು. ರಾಜುವಿಗೆ ತುಂಬ ಬೆಂಗಳೂರಿನ ಸೇಬು, ಕಿತ್ತಳೆಯ ಹಣ್ಣು, ಅಂಜೂರ, ಆಟದ ಸಾಮಾನು ಎಲ್ಲ ತಂದು ಕೊಟ್ಟರು. ರಾಜುವಿನ ಆನಂದ ಹೇಳತೀರದು. "ಆಹಾ! ಇವರಿಗೆ ನಮ್ಮ ಮಗುವಿನ ಮೇಲೆ ಎಷ್ಟು ಪ್ರೇಮ! ಅನ್ಯಾಯವಾಗಿ ಅವರನ್ನು ಇಷ್ಟು ದಿನಗಳೂ ತಿರಸ್ಕಾರ ದೃಷ್ಟಿಯಿಂದ ಕಂಡೆನಲ್ಲಾ? ಎಂದು ಸೀತೆಯೂ ರಾಮಚಂದ್ರನೂ ಪಶ್ಚಾತ್ತಾಪ ಪಟ್ಟರು.

ಪುನಃ ರಾಜು ಶೇಷಗಿರಿಯ ಮನೆಯಲ್ಲಿ ಕ್ಯಾಂಪ್ ಮಾಡಲಾರಂಭಿಸಿದನು. ಇವನನ್ನು ಮತ್ತೆ ತಡೆಯಲು ಸೋದರತ್ತೆ ಇರಲಿಲ್ಲವಲ್ಲ. ಅವರು ಕಳೆದ ತಿಂಗಳು ತಳ್ಳಿಗೆ ಹೊರಟು ಹೋಗಿದ್ದರು.

ಹಗಲು ಹನ್ನೊಂದು ಘಂಟೆ ಸಮಯ ರಾಮಚಂದ್ರನು ಕಛೇರಿಗೆ ಹೊತ್ತಾಯಿತೆಂದು ಅವಸರ ಅವಸರವಾಗಿ ಊಟಮಾಡುತ್ತಲಿದ್ದನು. ಸೀತೆ ಬಡಿಸುತ್ತಿದ್ದಳು. ಆಗತಾನೇ ಊಟ ಮುಗಿಸಿಕೊಂಡು ಸ್ಕೂಲಿಗೆ ಹೊರಟಿದ್ದ ರಾಜು "ಅಪ್ಪಾ ಮಾವ ಬಂದಿದ್ದಾರೆ. ನಂಗೆ ತುಂಬ ಕಲ್ಸಕ್ರೆ ತಂದಿದ್ದಾರೆ ಎಂದು ಒಂದೇ ಉಸುರಿಗೆ ಓಡಿಬಂದನು. ಅವನ ಕೈಯಲ್ಲೊಂದು ಬೆಳ್ಳಿಯ ತಟ್ಟೆ, ಅದರ ತುಂಬ ಕಲ್ಲುಸಕ್ಕರೆ.

"ಸಾರ್, ನಿಮ್ಮ ಮಗುವಿನ ಪುಣ್ಯವಿಶೇಷದಿಂದ ನಮಗೊಂದು ಮಗ ಹುಟ್ಟಿದ್ದಾನೆ. ಅದಕ್ಕೇ ತಮಗೂ, ತಮ್ಮ ಮಗುವಿಗೂ ಥ್ಯಾಂಕ್ಸ್ ಹೇಳಲು ಬಂದೆ ..." ಎಂದನ್ನುತ್ತಾ ಆನಂದಪರವಶನಾಗಿ ಒಳನುಗ್ಗಿದನು ಶೇಷಗಿರಿ. ಈ ಮಾತು ಕೇಳಿ ಸೀತೆಯೂ ರಾಮುವೂ ಬೆರಗಾದರು.

"ಬಹಳ ಸಂತೋಷ ಸಾರ್. ಏನು ನಮಗೆ ತಿಳಿಸೇ ಇರಲಿಲ್ಲವಲ್ಲ! ಓ ರಾಜೂ, ನಿನಗೊಬ್ಬ ಪುಟ್ಟ ತಮ್ಮ ಹುಟ್ಟಿದ್ದಾನಂತೋ!" ಎಂದ ರಾಮು.

"ಚಿನ್ನಾ, ನಿನ್ನ ತಮ್ಮನಿಗೂ ನಿನ್ನ ಹೆಸರೇ ಇಡುತ್ತೇನೆ ಚಿನ್ನಾ" ಎಂದು ಭಾವಪರವಶನಾಗಿ ಮಗುವನ್ನೆತ್ತಿ ಮುದ್ದಾಡತೊಡಗಿಬಿಟ್ಟನು ಶೇಷಗಿರಿ.

ಇದನ್ನು ಕೇಳಿದ ಸೀತೆಯೂ, ರಾಮುವೂ ಹೆಮ್ಮೆಯಿಂದ [illegible] ಉಬ್ಬಿದರು.

"ನಮ್ಮ ಮಗುವಿನಲ್ಲಿ ಅವರಿಬ್ಬರೂ ಇಟ್ಟ ಪ್ರೇಮದ ಫಲವೇ ಇದು! ಮಗುವನ್ನೀಗಲೇ ಹೋಗಿ ನೋಡಬೇಕೆನಿಸುತ್ತಲ್ಲಾ ..." ಎಂದೆಲ್ಲ ಸೀತೆಯ ಮನಸ್ಸಿನಲ್ಲಿ ಆನಂದತರಂಗಗಳು ಏಳಲಾರಂಭಿಸಿದುವು

---

# ಚಕ್ಕುಲಿ ಅತ್ತೆ

"ಬಾರೋ ಕಿಟ್ಟೀ ಬಾ".

"ಹುಟ್ಟಿದ ಹಬ್ಬ ಸಾಂಗವಾಗಿ ನೆರವೇರಿತೆ?" ಬೆಳಿಗ್ಗೆಯೇ ಬರಬೇಕೆಂದಿದ್ದೆ. ರಜ ಸಿಕ್ಕಲಿಲ್ಲ.

"ಅದೆಲ್ಲ ನನಗೆ ಗೊತ್ತಿಲ್ಲವೇನೋ. ಈಗಲಾದರೂ ಬಂದೆಯಲ್ಲ. ಲೋ ಸುಬ್ಬಾ, ಒಳಗೆ ಹೋಗಿ ಅತ್ತಿಗೆಯನ್ನು ಕೇಳಿ ಕೊಂಚ ಕಾಫೀ ತಿಂಡಿ ತಾರೋ" ಎಂದು ಮಾಧವನು ತನ್ನ ತಮ್ಮನನ್ನು ಕಳುಹಿದನು. ಐದು ನಿಮಿಷದೊಳಗಾಗಿ ಕಾಫೀ ತಿಂಡಿ ಹಾಜರಾಯಿತು. ಕಿಟ್ಟಿಯ ನೋಟವು ಮೊಟ್ಟಮೊದಲು ತಟ್ಟೆಯಲ್ಲಿದ್ದ ಚಕ್ಕುಲಿಯ ಮೇಲೆ ಬಿತ್ತು. "ಲೋ ಮಾಧೂ! ಈ ಬೆಂಗಳೂರಿನಲ್ಲಿ ಈ ಮೂರು ವರ್ಷದಲ್ಲಿ ಇಂದೇ ನಾನು ಇಂತಹ ಚಕ್ಕುಲಿಯನ್ನು ಕಂಡೆ ಕಣೋ." ಎಂದೆನ್ನುತ್ತಾ ಚಕ್ಕುಲಿಯನ್ನು ಮುರಿದು ಬಾಯಿಗೊಂದು ತುಂಡು ಹಾಕಿಕೊಂಡನು. ಬಳಿಕ "ಈ ಚಕ್ಕುಲಿ ನಮ್ಮ ಚಕ್ಕುಲಿ ಅತ್ತೆ ಮಾಡುವ ಚಕ್ಕುಲಿಯಂತೆಯೇ ಇದೆಯಲ್ಲೋ. ಒಬ್ಬೊಬ್ಬರ ಮನೆಯ ಚಕ್ಕುಲಿ ಇರುವುದಲ್ಲಾ, ಅಬ್ಬಬ್ಬಾ! ಬಾಯಲ್ಲಿ ಹಾಕಿ ಒಂದು ಸಲ ಕಡಿದರೆ ಸಾಕು. ಮೂವತ್ತೆರಡು ಹಲ್ಲುಗಳೂ ಉದುರಿ ಹೋಗಬೇಕಷ್ಟೆ. ಅಷ್ಟು ಗಟ್ಟಿ. ಆದರಿದನ್ನು ನೋಡು. ಬಾಯಲ್ಲಿ ಹಾಕುವುದರೊಳಗೆ ಬೆಣ್ಣೆಯಂತೆ ಕರಗಿಹೋಗುತ್ತದೆಯಲ್ಲಾ ಗಮ ಗಮವೆಂದು ಎಷ್ಟೊಂದು ಸುವಾಸನೆಯಾಗಿದೆ."

"ಓಹೋಹೋ ದೊಡ್ಡ ಚಕ್ಕುಲಿ ಎಕ್ಸ್‌ಪರ್ಟ್ ಆಗಿರುವೆಯಲ್ಲೋ ಕಿಟ್ಟೀ, ಈ ಪರಿಶೋಧನೆಗಾಗಿ ನಿನಗೊಂದು ಡಾಕ್ಟರೇಟ್ ಬಿರುದು ಕೊಡಬೇಕಷ್ಟೆ. ಅದಾರೋ ಅದು ಚಕ್ಕುಲಿ ಅತ್ತೆ?"

"ಆ ಚಕ್ಕುಲಿ ಅತ್ತೆಯವರ ಕೃಪೆಯಿಂದಲೇ ನಾನೀಗ ಇಷ್ಟರವರೆಗೆ ಓದಿ ಮುಂದಕ್ಕೆ ಬಂದೆ. ಆಕೆಯನ್ನು ಗುಡಿಯಲ್ಲಿಟ್ಟು ಪೂಜಿಸಬೇಕು.

ನಮ್ಮ ತಾಯೀ ಬಹಳ ಖಾಯಿಲೆ ಹೆಂಗಸೆಂದು ಹಿಂದೊಮ್ಮೆ ಹೇಳಿರುವೆ ನಲ್ಲಾ. ನಮ್ಮಪ್ಪನಂತೂ ಎಂಜಲು ಕೈಯಲ್ಲಿ ಕಾಗೆ ಓಡಿಸಲಾರರು ಅಡಿಗೆಯವರನ್ನು ಇಡಿಸುವರೇನು ? ನಮ್ಮಮ್ಮನಿಗೆ ಸುತರಾಂ ಕೈಲಾಗದೆ ಹೋದ ಸಮಯಗಳಲ್ಲಿ ಈ ಚಕ್ಕುಲಿಯತ್ತೆಯೇ ಬಂದು ನಮ್ಮಮ್ಮನಿಗೆ ಬೇಕಾದಷ್ಟು ಸಹಾಯ ಮಾಡುವಳು. ಚಿನ್ನದಂತಹ ಹೆಂಗಸು. ಪ್ರತಿವಾರವೂ ಬಂದು ನನಗೆ ಎರೆಯುವರು ಅಮ್ಮನಿಗೆ ಕೈಲಾಗದಲ್ಲಾ ಎಂದು ಆಗಾಗ್ಗೆ ಬಂದು ನನಗಾಗಿ ಏನಾದರೂ ಭಕ್ಷ್ಯಮಾಡಿಟ್ಟು ಹೋಗುವರು. ಆಕೆ ಚಕ್ಕುಲಿ ಬಹು ಚೆನ್ನಾಗಿ ಮಾಡುವರಾದುದರಿಂದ ಆಕೆಗೆ ನಾನೇ ಈ ಹೆಸರಿಟ್ಟೆ.

ನಮ್ಮಮ್ಮನು ಹಾಸಿಗೆ ಹಿಡಿದು ಮಲಗಿಬಿಡಲು, ಚಕ್ಕುಲಿ ಅತ್ತೆಯೇ ನಮ್ಮ ಮನೆಯಲ್ಲಿ ಬಂದಿದ್ದುಕೊಂಡು, ಅಮ್ಮನಿಗೆ ಸಕಲ ಶುಶ್ರೂಷೆಗಳನ್ನೂ ಮಾಡುತ್ತ ಮನೆಯ ಸಕಲ ಕಾರ್ಯಗಳನ್ನೂ ಗಮನಿಸಿ ನೋಡಿಕೊಳ್ಳುತ್ತಿದ್ದರು. ಅಮ್ಮನಿಗೆ ಆ ಅತ್ತೆಯೆಂದರೆ ಪ್ರಾಣ. ಇಬ್ಬರೂ ಬಹಳ ಅನ್ಯೋನ್ಯವಾಗಿರುತ್ತಿದ್ದರು. ಅಮ್ಮನಿಗೆ ಆದಿನ ಖಾಯಿಲೆ ಬಹಳ ಗಡುಸಾಯಿತು. ಅಪ್ಪನು ಡಾಕ್ಟರನ್ನು ಕರೆದುತರಲು ಹೋಗಿದ್ದರು. ಅತ್ತೆಯೂ ನಾನೂವೇ ಅಮ್ಮನ ಹಾಸಿಗೆಯ ಪಕ್ಕದಲ್ಲಿದ್ದೆವು. ಅಮ್ಮನಿಗೆ ಶ್ವಾಸ ಎಳೆಯಲಾರಂಭಿಸಿ ಬಿಟ್ಟಿತು. ಅಮ್ಮ ಬಹಳ ಶ್ರಮದಿಂದ ಕಣ್ಣನ್ನು ಒಂದು ಸಲ ತೆರೆದಳು. ಮಾತನಾಡಲು ಯತ್ನಿಸಿದಳು, ಆದರೆ ಮಾತನಾಡಲಾಗಲಿಲ್ಲ. ಅತ್ತೆ ಅವಳ ಬಾಯಲ್ಲಿ ಕೊಂಚ ಹಾಲು ತೊಟ್ಟಿಕ್ಕಿಸಳು. ಬಳಿಕ ಸ್ವಲ್ಪ ಚೇತರಿಸಿಕೊಂಡು "ಅಕ್ಕಾ ಇನ್ನು ಇವನಿಗೆ ನೀನೇ ಅಮ್ಮನಾಗಿರಬೇಕು. ಅವರನ್ನು ಕುರಿತು ನನಗ್ಯಾವ ಚಿಂತೆಯೂ ಇಲ್ಲ. ಮುಂದಿನ ತಿಂಗಳೇ ಅವರಿಗೊಂದು ಹೊಸ ಹೆಂಡತಿ ಬಂದರೂ ಬಂದಾಳು. ಮಗುವಿನ ಗತಿಯೇ ಪೇಚಾಟ...." ಅಷ್ಟರ ಮೇಲೆ ಅಮ್ಮನಿಂದ ಮಾತನಾಡಲಾಗಲಿಲ್ಲ. ಬಿಕ್ಕಳಿಕೆ ಶುರುವಾಯಿತು." ನಮ್ಮೆಲ್ಲರ ಕಣ್ಣುಗಳಲ್ಲೂ ಕಣ್ಣೀರು ಉರುಳಿತು. "ಛೀ! ಹಾಗೆಲ್ಲ ಮಾತನಾಡಬಾರದು ಸುಬೀ, ನೆಮ್ಮದಿಯಾಗಿ ನಿದ್ರೆಮಾಡು." ಎಂದು ಅಮ್ಮನನ್ನು ಸಂತೈಸುತ್ತಿರುವಾಗಲೇ ಅಪ್ಪನು ಡಾಕ್ಟರ ಸಹಿತ ಬಂದುಬಿಟ್ಟರು. ಅಮ್ಮನೂ ಈ ಲೋಕವನ್ನು ತೊರೆದಳು.

*   *   *   *

ಮುಂದಿನ ತಿಂಗಳೇ ಅಮ್ಮ ಹೇಳಿದಂತೆ ಅಪ್ಪ ಮತ್ತೆ ಮದುವೆಮಾಡಿ ಕೊಂಡರು. ನೂತನ ದಂಪತಿಗಳಿಬ್ಬರೂ ಸುಖ ಸಂಸಾರದಲ್ಲಿ ತಲ್ಲೀನರಾದರು. ನನ್ನನ್ನು ಕೇಳುವವರಾರು? ಪೆನ್ಸಿಲೊಂದಕ್ಕೆ ಹಣಬೇಕಾಗಿದ್ದರೂ ಚಿಕ್ಕಮ್ಮನ ಹತ್ತಿರ ಹೋಗಿ ಹಣ ಬೇಡಬೇಕು. ಅಪ್ಪನು ನನ್ನನ್ನು ಮಾತನಾಡಿಸುತ್ತಲೇ ಇರಲಿಲ್ಲ. ಕಾಲೇಜಿಗೆ ಹೋಗುವಾಗಲೂ ಬರುವಾಗಲೂ ಚಕ್ಕುಲಿ ಅತ್ತೆಯಮನೆಗೆ ಹೋಗಿ ಕೊಂಚ ಕಾಲ ಮಾತನಾಡಿಬಿಟ್ಟು ಬರುವ ವಾಡಿಕೆ ನನಗೆ. ಆಕೆಯು ಮಗಳ ಪಾಠ ಗೀತ ಹೇಳಿಕೊಡುತ್ತಲೂ ಇದ್ದ. ಅತ್ತೆ ನನಗಾಗಿ ಏನಾದರೊಂದು ಭಕ್ಷ್ಯ ಮಾಡಿಟ್ಟದ್ದು ನನಗೆ ಕೊಡದಿರರು." ನಿನಗೇನುಬೇಕಿದ್ದರೂ ನನ್ನ ಹತ್ತಿರ ಸಂಕೋಚಪಡಬೇಡ ಮಗೂ, ನಿನಗೆ ಬೇಕಾದದ್ದನ್ನೆಲ್ಲ ಕೇಳು. ನಾನು ನಿನ್ನ ತಾಯಿಯೆಂದು ತಿಳಿ" ಎಂದೆಲ್ಲ ಪದೇ ಪದೇ ಹೇಳುವರು ಆಕೆ. ಇದರ ನಡುವೆ ಅಪ್ಪನು ಖಾಯಿಲೆ ಮಲಗಿಬಿಟ್ಟರು. ನಾನಾಗ "ಬಿ ಇ." ಪರೀಕ್ಷೆಗೆ ಹಣ ಕಟ್ಟಬೇಕಾಯಿತು. ಚಿಕ್ಕಮ್ಮನಂತೂ ಹಣ ಕೇಳಿದೊಡನೆಯೇ ಬೈಗಳ ಮಳೆ ಸುರಿಯ ತೊಡಗುವಳು, ನನ್ನ ಪಾಡಂತೂ ಧರ್ಮ ಸಂಕಟವಾಯಿತು. ಬಳಿಕ ನನ್ನ ಮುಖ ನೋಡಿ ನನ್ನ ಸಂಕಟ ತಿಳಿದು, ಚಕ್ಕುಲಿ ಅತ್ತೆಯು ನನ್ನನ್ನು ಪೀಡಿಸಿ ವಿಷಯ ತಿಳಿದು, ಹಣ ಒದಗಿಸಿದರು. ಅಂದು ಆ ಪುಣ್ಯಾತಿಗತ್ತಿಯು ಹಣ ಒದಗಿಸದಿದ್ದರೆ ನಾನಿಷ್ಟರಮಟ್ಟಿಗೆ ಈ ಸುಖ ಹೊಂದುತ್ತಿದ್ದೆನೇ. ಇದರ ನಡುವೆ ಮದರಾಸಿನಲ್ಲಿ evacuation ಗಲಭೆ ಎದ್ದಿತು. ಅಪ್ಪನನ್ನೂ, ಚಿಕ್ಕಮ್ಮನನ್ನೂ, ಚಿಕ್ಕಮ್ಮನ ತಂದೆ ತಮ್ಮ ಹಳ್ಳಿಗೆ ಕರೆದೊಯ್ದರು. ನಾನು ಚಕ್ಕುಲಿ ಅತ್ತೆಯ ಮನೆಯಲ್ಲಿದ್ದುಕೊಂಡು ಪರೀಕ್ಷೆಗೆ ಓದುತ್ತಲಿದ್ದೆ. ಪರೀಕ್ಷೆಯೂ ಮುಗಿಯಿತು. ಆಗ ಅಪ್ಪನು ಹೋಗಿಬಿಟ್ಟರೆಂದು ಕಾಗದ ಬಂದಿತು. ಹಳ್ಳಿಗೆ ಹೋಗಿ ಕರ್ಮಾಂತರಗಳನ್ನು ಮುಗಿಸಿಕೊಂಡು ಮದರಾಸಿಗೆ ಹಿಂದಿರುಗಿದೆ. ಅಷ್ಟರೊಳಗಾಗಿ ಚಕ್ಕುಲಿ ಅತ್ತೆಯ ಮನೆಯವರೂ ಯುದ್ಧಕ್ಕೆ ಹೆದರಿ ಅದೆಲ್ಲಿಗೋ ಊರುಬಿಟ್ಟು ಹೊರಟು ಹೋದರೆಂಬ ವರ್ತಮಾನ ತಿಳಿಯಿತು. ಅಪ್ಪನ ಅಲ್ಪ ಸ್ವಲ್ಪ ಆಸ್ತಿ ಪಾಸ್ತಿಯನ್ನಂತೂ ಚಿಕ್ಕಮ್ಮ ಅಪಹರಿಸಿಬಿಟ್ಟಳು. ಸರಿ ನನ್ನ ಹೊಟ್ಟೆಪಾಡನ್ನು ನಾನು ನೋಡಿಕೊಳ್ಳುವ ಸ್ಥಿತಿ ಒದಗಿತು. ದೈವ ಕೃಪೆಯಿಂದ ಪರೀಕ್ಷೆಯು ಪ್ಯಾಸಾಯಿತು. ಬೆಂಗಳೂರಿಗೆ ಬಂದು

ಈ ಏರ್‌ಕ್ರಾಫ್ಟ್ ಫ್ಯಾಕ್ಟರಿಯಲ್ಲಿ ಸೇರಿದ್ದಾಯಿತು. ಈ ಜನ್ಮದಲ್ಲಿ ಚಕ್ಕುಲಿ ಅತ್ತೆಯವರನ್ನು ಪುನಃ ಕಾಣುವ ಯೋಗ ಸಿಕ್ಕರೆ ನಾನೆಂತಹ ಭಾಗ್ಯ ವಂತನೋ............

ಆಕೆಯ ಹೆಸರೇನು ?

"ಸುಬ್ಬಲಕ್ಷ್ಮಮ್ಮ ಅಂತ." ಅವರ ಯಜಮಾನರ ಹೆಸರು ಮುನಿಸೀಫ್ ಗೋವಿಂದರಾಯರು. ಮಗಳ ಹೆಸರು ಕಮಲೆ.

"ಹಾಗಾದರೆ ನಿನ್ನ ಚಕ್ಕುಲಿ ಅತ್ತೆ ಮಾಡಿದ ಚಕ್ಕುಲಿಯೇ ಇದು ಕಿಟ್ಟೀ ! ಆಕೆಯೇ ನಿನ್ನ ಅತ್ತೆಯವರು. ಅವರೂ ಸಹ ನಿನ್ನ ವಿಷಯವಾಗಿ ಪದೇ ಪದೇ ಹೇಳುವುದುಂಟು. ಆದರೆ ಅವರು ಹೇಳುವ ಕೃಷ್ಣಸ್ವಾಮಿ ನೀನೇ ಎಂಬುದು ನನಗೆ ತಿಳಿದಿರಲಿಲ್ಲ. ಇಕೋ ಅವರನ್ನು ಕರೆತರುತ್ತೇನೆ ಎಂದು ತಟ್ಟನೆ ಎದ್ದು ಹೋಗಿ ಕರತಂದೇ ಬಿಟ್ಟನು.

ಅತ್ತೆ!!! ಎಂದು ಗಟ್ಟಿಯಾಗಿ ಕಿರುಚಿಬಿಟ್ಟನು ಕಿಟ್ಟೀ, ಸುಬ್ಬಲಕ್ಷ್ಮಮ್ಮನು "ಅಪ್ಪಾ ಕಿಟ್ಟೀ, ಚೆನ್ನಾಗಿದ್ದೀಯೇನೋ ?" ಎಂದು ಕರುಳಿನಿಂದ ಹೊಮ್ಮುವ ಅತೀತ ವಾತ್ಸಲ್ಯದೊಡನೆ ಅಂದರು. ಕಮಲೆಯ ಸೊಂಟದಲ್ಲಿದ್ದ ಮಗು ಬಾಲಕೃಷ್ಣನು "ಮಾಮಾ ಮಾಮಾ" ಎಂದು ಕಿಟ್ಟಿಯ ಕಡೆಗೆ ಜಿಗಿದನು.

ಕೊಂಚಕಾಲ ಅತ್ಯಾನಂದದಿಂದ ಯಾರ ಬಾಯಲ್ಲೂ ಮಾತು ಹೊರಡದಂತಾಯಿತು. ಬಳಿಕ ಕಿಟ್ಟಿಯು ಕೊಂಚ ಚೇತರಿಸಿಕೊಂಡು ಮಗುವನ್ನು ಮುದ್ದಿಟ್ಟು, ಕೋಟು ಜೇಬಿನಿಂದ ಚೆಕ್ ಬುಕ್ ತೆಗೆದು ೧೦೦೦ ರೂಪಾಯಿಗೊಂದು Cheque ಬರೆದು, "ಕಮಲೂ ಇಕೋ ನಿನ್ನ ಪುಟ್ಟ ಮಾವನ ಹುಟ್ಟಿದ ಹಬ್ಬದ ಉಡುಗರೆ ನನ್ನದು" ಎಂದ.

---

# ನಾನು ಕೊಂಡಾಡುವ ದೀಪಾವಳಿ

ದೀಪಾವಳಿಗಿನ್ನೂ ಎರಡು ದಿನಗಳು ಮಾತ್ರವಿದ್ದುವು. ಅಷ್ಟರೊಳಗಾಗಿಯೇ ಊರಲ್ಲೆಲ್ಲೆಲ್ಲಿಯೂ "ಪಟ್ ಪಟ್" ಎಂಬ ಪಟಾಕಿ ಹೊಡೆಯುವ ಶಬ್ದವು ಆರಂಭವಾಗಿ ಬಿಟ್ಟಿದ್ದಿತು. ನಮ್ಮ ಸುಧೆಯೂ, ಸುಕುಮಾರನೂ ಈಗಾಗಲೇ ಪಟಾಕಿ, ಮತಾಪುಗಳಿಗಾಗಿ ಪೀಡಿಸತೊಡಗಿದರು. ಅಂದು ಸಂಜೆ ಐದು ಘಂಟೆಗೆ ಸರಿಯಾಗಿ ಆಫೀಸಿನಿಂದ ಹಿಂದಿರುಗಿ ಬಂದು ನಮ್ಮನ್ನು ಪೇಟೆಗೆ ಕರೆದುಕೊಂಡು ಹೋಗಿ ಪಟಾಕಿ ಮತಾಪುಗಳನ್ನೂ ಅವಶ್ಯಕವಾದ ಜವಳಿಗಳನ್ನೂ ಕೊಂಡುಕೊಡುವುದಾಗಿ ನಮ್ಮ ಯಜಮಾನರು ನಮಗೆ ತಿಳಿಸಿ ಆಫೀಸಿಗೆ ಹೋಗಿದ್ದರು.

ಅಂದು ಹಗಲೆಲ್ಲಾ ಕುತೂಹಲದ ಬಿಸಿಯಿಂದ ನನಗೆ ಯಾವ ಕೆಲಸ ಮಾಡಲು ಕೈ ಓಡಲಿಲ್ಲ. ಈ ಸಲ ಯಾವ ಬಗೆಯ ಸೀರೆ ಕೊಳ್ಳೋಣ? ಸುಧೆಗೆ ಯಾವ ಬಣ್ಣದ ಲಂಗ ಇಲ್ಲ? ಅವಳಿಗೆ ಯಾವ ಮಾದರಿಯ ಜಂಪರ್ ಹೊಲಿಸೋಣ? ಸುಕುಮಾರನಿಗೆ ಯಾವ ಬಗೆಯ ಸೂಟ್ ಹೊಲಿಸೋಣ" ಎಂದು ಹಲವಾರು ರೀತಿಯಲ್ಲಿ ಚಿಂತಿಸುತ್ತಲೇ ಒಂದು ರೀತಿಯಾಗಿ ಕೆಲಸವೆಲ್ಲವನ್ನೂ ಮಾಡಿ ಮುಗಿಸಿದೆ.- ಬಳಿಕ ಮಕ್ಕಳಿಗೆ "ಡ್ರೆಸ್" ಮಾಡಿ ಸೇವಕಿ ಸಿದ್ದಿಗೆ ಮನೆ ನೋಡಿಕೊಳ್ಳುವಂತೆ ಹೇಳಿ, ನಾನೂ ಅಲಂಕರಿಸಿಕೊಂಡು ತಯಾರಾಗಿ ಬೀದಿಯ ಬಾಗಿಲಿನ ಮುಂದೆ ನಿಂತಿದ್ದೆ.

ಅವರೂ ಹೊತ್ತಿಗೆ ಸರಿಯಾಗಿ ಮನೆಗೆ ಬಂದರು. ನಾನು ತಂದಿರಿಸಿದ ಕಾಫೀ ಫಲಾಹಾರಾದಿಗಳನ್ನು ಅವಸರ ಅವಸರವಾಗಿ ತೆಗೆದುಕೊಂಡು "ಡ್ರೆಸ್" ಬದಲಾಯಿಸಿಕೊಂಡು ಹೊರಡಲನುವಾದರು. ಸರಿ, ಎಲ್ಲರೂ ಮೋಟಾರಿನಲ್ಲಿ ಹತ್ತಿ ಕುಳಿತೆವು. ಇನ್ನೇನು ಹೊರಡಬೇಕು. ಆಗ ಸಿದ್ದಿಯು ಓಡಿಬಂದು ಹಲ್ಲು ಕಿರಿಯುತ್ತಾ ಕೈಗಳನ್ನು ಹಿಸುಕಿಕೊಂಡು ನಿಂತಳು.

"ಏನೇ ಅದು ? ಹೊರಡುವ ಸಮಯದಲ್ಲಿ? ಬೇಗ ಬೊಗಳು ಎಂದೆ.

"ಅದೇ....ಮತ್ತೆ....ತಾಯೀ........"

"ಅದೇ ಮತ್ತೆ ಎಂದರೇನು ? ಬೇಗ ಬೊಗಳು. ಹೊತ್ತಾಯಿತು ....ಊಂ'' ಎಂದು ಗದರಿಸಿದರು ನನ್ನವರು.

ಸಿದ್ದಿಯು ತಡವರಿಸುತ್ತಾ "ಅದೇ ಮತ್ತೆ....ಎರಡೇ ಎರಡಾಣೆ... ಮಾತ್ರ....ತಾಯೀ'' ಎಂದು ಅಂಗಲಾಚಿ ಬೇಡುತ್ತಾ ಕೈನೀಡಿದಳು.

"ನನ್ನಲ್ಲೀಗ ಚಿಲ್ಲರೆಗಿಲ್ಲರೆ ಯೇನೂ ಇಲ್ಲ! ನಾಳೆ ನೋಡೋಣ ಹೋಗು'' ಎಂದು ಅವಳಿಗೆ ಉತ್ತರಕೊಟ್ಟು, ಅವರನ್ನು ಕುರಿತು, ನೀವು ಕಾರನ್ನು ಓಡಿಸೀಂಪ್ರೇ. ಅವಳಿಗೇನಂತೆ ಬೇರೆ ಕೆಲಸ'' ಎಂದೆ.

ಆಸೆ, ನಿರೀಕ್ಷಣೆ, ನಂಬಿಕೆಯಿಂದೊಡಗೂಡಿದ ಅವಳ ಆ ನೋಟವು ಕ್ಷಣಮಾತ್ರದಲ್ಲಿ ಮಾರ್ಪಟ್ಟು, ದುಃಖವೇ ಆವಿರ್ಭವಿಸಿದಂತೆ ನಿಂತಳು. ಅವಳ ಆ ಕರುಣಾಜನಕವಾದ ದೃಶ್ಯವು ನನ್ನ ಎದೆಯಲ್ಲಿ ಅಲಗಿನಂತೆ ಹೊಕ್ಕಿತು. ಮೋಟಾರು ವಾಯು ವೇಗವಾಗಿ ಓಡುತ್ತಿರಲು, ನನ್ನ ಮನದಲ್ಲಿ ಆಲೋಚನಾ ತರಂಗಗಳು ಮೋಟಾರಿನ ಚಕ್ರಗಳಿಗಿಂತಲೂ ನೂರ್ಮಡಿ ವೇಗದಲ್ಲಿ ಉದ್ಭವಿಸಿ ಉದ್ಭವಿಸಿ ಮಾಯವಾಗುತ್ತಲಿದ್ದವು. ನನ್ನ ಹಣದ ಚೀಲದಲ್ಲಂತೂ ಬೇಕಾದಷ್ಟು ಚಿಲ್ಲರೆಗಳಿದ್ದುವು ಅದರೆ...........ಅವರೆ. "ಕೇವಲ ದೀನಳೊಬ್ಬಳ ಬೇಡಿಕೆ ತಾನೇ ಏನೀಗ ಪ್ರಮಾದ" ಎಂಬ ಲೋಕಸ್ವಭಾವಕ್ಕನುಗುಣವಾದ ಒಂದು ರೀತಿಯ ಅಲಕ್ಷಭಾವ ದಿಂದಲೂ, ಬೇಗ ಪೇಟೆಗೆ ಹೋಗಬೇಕೆಂಬ ಕಾತುರತೆಯಿಂದಲೂ ಹಾಗೆ ವರ್ತಿಸಿದೆದನಾದರೂ, ಆ ಬಳಿಕ ನನ್ನ ಮನಸ್ಸು "ಅಯ್ಯೋ! ಆ ಸಣ್ಣ ಹುಡುಗಿ ಅದೇತಕ್ಕಾಗಿ ಹಣ ಕೇಳಿದಳೋ, ಏನೋ, ಮಹಾ ಪ್ರಮಾದ ಕೇವಲ ಎರಡಾಣೆ. ಕೊಡಲು ಹಿಂಜರಿದೆನಲ್ಲಾ....ನಾನೆಂತಹ ಪಾಪಿಷ್ಟೆ" ಎಂದು ನೊಂದುಕೊಳ್ಳತೊಡಗಿತು.

ಪೇಟೆಯಲ್ಲಂತೂ ನಾನು ಯಂತ್ರದಂತೆ ಸುಮ್ಮನೇ ನಡೆಯುತ್ತ ಲಿದ್ದೇನೆ ಹೊರತು ನನ್ನ ಮನಸ್ಸೆಲ್ಲ ಸಿದ್ದಿಯ ಪಾಲಾಗಿದ್ದಿತು. ಥಳಥಳ ವೆಂದು ಹೊಳೆಯುತ್ತಲಿರುವ ಜರತಾರಿ ಸೀರೆಗಳೂ, ವಿದ್ಯುದ್ದೀಪಗಳ

ಬೇಕಲ್ಲಿ ಕಣ್ಣು ಕೋರೈಸುತ್ತಿದ್ದ ವಿವಿಧ ಬಣ್ಣಗಳ ರೇಷ್ಮೆ ಬಟ್ಟೆಗಳೂ, ನನ್ನ ನೋಟದಿಂದ ಸರಿದುವು. ಸಿದ್ದಿಯ ನಿರಾಶೆಹೊಂದಿದ ಕರುಣಾಜನಕವಾದ ರೂಪವೇ ನನ್ನ ಕಣ್ಣ ಮುಂದೆ ನಿಂತಿದ್ದಿತು. ನನ್ನ ಸ್ವಾಮಿಯು "ಏನೇ ಜಯ ? ಹುಚ್ಚಿಯಂತೆ ನಿಂತಿರುವೆ? ಮೈ ಸ್ವಸ್ಥವಿಲ್ಲವೇನು ? ಬೇಗ ಬೇಗ ಬೇಕಾದ ಜವಳಿಯನ್ನು ಆರಿಸಿಕೊ. ಲೆಕ್ಕ ತೀರಿಸಿಬಿಟ್ಟು ಪಟಾಕಿಯ ಅಂಗಡಿಗೆ ಹೋಗೋಣ" ಎಂದರು. ಬಳಿಕ ಏನೋ ಒಂದು ರೀತಿಯಾಗಿ ಮನಸ್ಸನ್ನು ಬಿಗಿಹಿಡಿದು, ಬೇಕಾದ ಬಟ್ಟೆಗಳನ್ನು ಆರಿಸಿ ತೆಗೆದೆ.

ಪೇಟೆಯಿಂದ ಮನೆಗೆ ಹಿಂದಿರುಗುವಾಗ "ಈಗ ಪೇಟೆಯಿಂದ ನೂರಾರು ರೂಪಾಯಿಗಳಿಗೆ ನಾನಾ ಸಾಮಾನು ಕೊಂಡು ತರಲಿಲ್ಲವೇ. ಆ ಎರಡಾಣೆ ದೊಡ್ಡ ಖರ್ಚಾಗಿ ಹೋಯಿತೇನು ? ಪಾಪ, ಬೆಳಗಿನಿಂದ ಹತ್ತಾರುಸಲ ಕೇಳಿದಳಲ್ಲಾ ಹುಡುಗಿ........ .... .." ಎಂದು ಮರುಗಿದೆ. ಅಂದು ರಾತ್ರಿ ನನಗೆ ನಿದ್ರೆಯೇ ಹತ್ತಲಿಲ್ಲ. ನೆನಪಿನಲ್ಲೇ ಕಳೆದೆ........

ಸಿದ್ದಿ ಒಬ್ಬ ತಬ್ಬಲಿ ಹುಡುಗಿ. ಕಪ್ಪಗೆ, ತೆಳ್ಳಗಿರುವಳು. ಹದಿಮೂರು ವರ್ಷ ವಯಸ್ಸಾಗಿದ್ದರೂ ಬಡತನದಲ್ಲಿ ಬೆಂದು ಬತ್ತಿಹೋಗಿ ಬೆಳವಣಿಗೆಯೇ ಇಲ್ಲದೆ ಹತ್ತು ವರ್ಷದ ಹುಡುಗಿಯಂತಿರುವಳು. ಆದರೆ ಅವಳ ಚುರುಕಾದ ಹೊಳವುಗಣ್ಣುಗಳು ಅವಳ ದೇಹಕ್ಕೊಂದು ತೆರನಾದ ಕಾಂತಿಯನ್ನೀಯುತ್ತಿದ್ದುವು. ಸಿದ್ದಿ ಬಹಳ ಒಳ್ಳೆಯ ಹುಡುಗಿ. ಸೋಮಾರಿತನವೆಂಬ ಮಾತೇ ಅವಳಲ್ಲಿಲ್ಲ. ಸದಾ ಕಾಲವೂ ಬುಗುರಿಯಂತೆ ಏನಾದರೊಂದು ಕೆಲಸವನ್ನು ಮಾಡುತ್ತಿರುವುದೇ ಅವಳ ಹುಟ್ಟುಗುಣ.

ಅವಳು ಅವಳ ಸೋದರ ಮಾವನ ಮನೆಯಲ್ಲಿ ವಾಸಿಸುತ್ತಿದ್ದಳು. ಅಲ್ಲ .......ಅವಳ ಸೋದರತ್ತೆಗೆ ಗುಲಾಮಳಾಗಿದ್ದಳೆಂದರೆ ಒಪ್ಪುವ ಮಾತು. ಮಾವನೊಬ್ಬ ಕುಡುಕ. ಅತ್ತೆಯೊಬ್ಬಳು ರಾಕ್ಷಸಿ. ಅವರಿಬ್ಬರ ನಡುವೆ ಸಿಕ್ಕಿ ಸೇಚಾಡುತ್ತಿದ್ದಳು ಸಿದ್ದಿ. ಮಾವನ ಕುಡಿತಕ್ಕೆ ಅವನ ಸಂಪಾದನೆ ಸಾಲದೆ, ಸಿದ್ದಿಯ ಸಂಬಳವನ್ನೂ ಮತ್ತು ಸಿದ್ದಿಯ ಸೋದರತ್ತೆಯ ಸಂಬಳವನ್ನೂ ಕಿತ್ತುಕೊಂಡು ಹೋಗಿ ಹೆಂಡದಂಗಡಿಗೆ ಸುರಿಯುತ್ತಲಿದ್ದ ಅವಳ ಮಾವ. ಅವಳ ಸೋದರತ್ತೆ ನಾಲ್ಕು ಮನೆಗಳ ಕಸಗುಡಿಸಿ ತಿಂಗಳಿಗೆ ಐದಾರು

ರೂಪಾಯಿ ಸಂಪಾದಿಸುತ್ತಲಿದ್ದಳು. ಸಿದ್ದಿಯನ್ನು ನಮ್ಮ ಮನೆಗೆ ಕರೆತಂದು ತಿಂಗಳಿಗೆ ಮೂರು ರೂಪಾಯಿ ಸಂಬಳದಲ್ಲಿ ಕೆಲಸಕ್ಕಿರಿಸಿದವಳು ಅವಳೇ. ಆ ಕುಟುಂಬಕ್ಕೊಂದು ನಂದಾ ದೀಪದಂತೆ ಬೆಳಗುತ್ತಿದ್ದಳು ಸಿದ್ದಿ. ಅವಳ ಮಾವನಿಗೊಂದು ಗಂಡು ಕೂಸುಂಟು. ಅದನ್ನು ಕಂಡರೆ ಸಿದ್ದಿಗೆ ಪ್ರಾಣ.

* * * *

ಆ ದಿವಸದ ಬಳಿಕ ಹತ್ತು ಹನ್ನೆರಡು ದಿನಗಳು ಸಿದ್ದಿ ಕೆಲಸಕ್ಕೆ ಬರಲಿಲ್ಲ. ಬಾರದುದಕ್ಕೆ ಕಾರಣವೂ ತಿಳಿಯಲಿಲ್ಲ. ಹನ್ನೆರಡನೆಯ ದಿನ ಬೆಳಗ್ಗೆ ಸಿದ್ದಿ ಕೆಲಸಕ್ಕೆ ಹಾಜರಾದಳು. ಅವಳನ್ನು ಕಂಡೊಡನೆಯೇ ನನ್ನ ಹೃದಯದ ಭಾರ ಕಳೆದಂತಾಯಿತು. "ಯಾಕೆ ಸಿದ್ದಿ ಇಷ್ಟು ದಿನ ಕೆಲಸಕ್ಕೆ ಬರಲಿಲ್ಲ?" ಎಂದೆ.

ನನ್ನ ಮಾವನ ಮಗ ದೀಪಾವಳಿ ದಿನ ಸತ್ತೋದನಕನ್ರವ್ವಾ, ಚಿನ್ನದ ಗೊಂಬೆಯಂತಿದ್ದಲ್ರವ್ವಾ" ಎಂದು ಗದ್ಗದ ಸ್ವರದಲ್ಲಿ ನುಡಿದಳು. ಕಣ್ಣುಗಳಿಂದ ಬಳಬಳನೆ ಕಣ್ಣೀರು ಸುರಿಯತೊಡಗಿತು.

"ಏನಾಗಿತ್ತು ಮಗೂಗೆ?"

"ಅದೇ ಕನ್ರವ್ವಾ, ಸೀತ್‌ಬೇಧೀ ಆಗಿತ್ತು. ಅದೇ ನೆವದಿಂದ ಹಾಸ್ಗೆ ಹಿಡಿದ್ಬಿಟ್ಟಿದ. ನಾಲಡ್ದಕ್ಕೆ ದೀಪಾವಳಿಗೆ ದಿನಕ್ಕೆ ಎರಡು ದಿನಾ ಮುಂಚೆ ಕೂಸು ಪಟಾಕಿ ಬೇಕೂಂತ ಹಠವನ್ನೇ ಹಿಡ್ದ. ಆ ಚಂಡಾಳ ಚೆನ್ನಾಗಿ ಕುಡದ್ಬಂದಿದ್ದ, ಮಗೂನ್ನ ಚೆನ್ನಾಗಿ ಒದ್ದು ಒದ್ದು ನಡೆಬಡ್ದು ಬಿಟ್ಟ. "ಪಟಾಕಿ........ಪಟಾಕಿ" ಅನ್ನುತ್ತಾ ಪ್ರಾಣಬಿಟ್ಟ ನನ್ ರಾಜಾ" ಎಂದು ಪ್ರಲಾಪಿಸಲಾರಂಭಿಸಿದಳು. ಅವಳ ದುಃಖವನ್ನು ಕಂಡು ನನಗೂ ಅಳು ಬಂದಿತು.

"ಏನೇ ಸಿದ್ದಿ. ಆ ದಿನ ಎರಡಾಣೆ ಯಾಕೆ ಕೇಳಿದೆ?" ಎಂದೆ.

"ಅದೇ ಮತ್ತ ಕೂಸಿಗೆರಡು ಪಟಾಕಿಸರ ಕೊಂಡ್ಕೊಡೋಣಾಂತ ಕೇಳ್ದೆ ಕನ್ರವ್ವಾ" ಎಂದಳು ಬಿಕ್ಕಳಿಸುತ್ತಾ.

"ಅಯ್ಯೋ ಪಾಪವೇ? ಆಗ್ಲೇ ಇದನ್ನೆಲ್ಲಾ ನನಗೆ ಯಾಕೆ ಹೇಳಲಿಲ್ಲವೇ ನೀನು? ಇಕೋ ಈ ಎರಡು ರೂಪಾಯಿ. ಪಟಾಕಿಕೊಂಡು

ತಂದು ನಿನ್ನ ಕೇರಿಯ ಮಕ್ಕಳಿಗೆಲ್ಲಾ ಹಂಚು. ನಿನ್ನ ರಾಜನ ಆತ್ಮಕ್ಕೆ ಶಾಂತಿಯುಂಟಾಗಲಿ" ಎಂದು ನನ್ನ ಸೊಂಟದಲ್ಲಿ ಸಿಕ್ಕಿಸಿಕೊಂಡಿದ್ದ ಎರಡು ರೂಪಾಯಿಗಳನ್ನು ತೆಗೆದು ಅವಳ ಕೈಗೆ ಕೊಟ್ಟೆ.

ಅವಳ್ಕಾವಳು "ಬೇಡ್ರಪ್ಪಾ, ಬೇಡ. ಈಗ ಸಾವಿರ ರೂಪಾಯಿಯ ಪಟಾಕಿಕೊಂಡು ತಂದು ಊರ ಮಕ್ಳಿಗೆಲ್ಲಾ ಹಂಚಿದ್ರೂನೂವೆ ನನ್ನ ರಾಜನ ಕೈಗೆ ಕೊಟ್ಟಂತಾದೀತೇ? ಅದನ್ನಾನು ತಗೆದುಕೊಂಡು ಸಂತಸದಿಂದ ಕಣ್ಗಳ್ನ ಇಷ್ಟಿಷ್ಟಗಲ ಮಾಡ್ಕೊಂಡು ಸಂತಸದಿಂದ ಕುಣಿಯುತ್ತಾ ಚಿಮ್ಮುತ್ತಾ ನನ್ಕಂದು ಕುಪ್ಪಾಕ್ಕೋದ್ನ ನಾನ್ಕಂಡೇನೇ" ಎಂದು ಹಲುಬಿದಳು.

"ಅಯ್ಯೋ! ನನ್ನ ಅಹಂಕಾರವೂ, ಅಲಕ್ಷ್ಯವೂ, ಆ ಸಾಯುವ ಮಗುವಿಗೆ ಪಟಾಕಿ ಸಿಕ್ಕದಂತೆ ಮಾಡಿದುವು. ನಾನೆಂಥ ಪಾಪಿಷ್ಟ. ಆ ಅನಾಥ ಬಾಲಕಿಯ ಹೃದಯದಲ್ಲಿ ಉದ್ಭವಿಸಿದ ಕರುಣೆಯ ಮಹಿಮೆಯೆಷ್ಟು! ಪರೋಪಕಾರದ ಗುಣದ ಆಳವೆಷ್ಟು! ಇಷ್ಟೊಂದು ಐಶ್ವರ್ಯದಲ್ಲಿಯೂ, ಸುಖಭೋಗದಲ್ಲಿಯೂ ತೊಳಲಾಡುವ, ಅನುಭವಸ್ಥನಾದ ಮೂವತ್ತುವರ್ಷ ಪ್ರಾಯದವನ ಅಹಂಕಾರವೆಷ್ಟು! ಅಲಕ್ಷ್ಯವೆಷ್ಟು, ಅಲ್ಪಬುದ್ಧಿಯೆಷ್ಟು! ಆಗ ನನಗೆ ಸಿದ್ದಿಯು ಒಂದು ಆದರ್ಶ ದೇವಿಯಂತೆಯೂ ನಾನೊಬ್ಬ ಸಣ್ಣ ಹುಳುವಿನಂತೆಯೂ ಅನುಭವವಾಯಿತು.

ಅವರ ಬಳಿಕ ಪ್ರತಿಯೊಂದು ದೀವಳಿಗೆ ಹಬ್ಬದಲ್ಲಿಯೂ ಸಿದ್ದಿಯ ಮತ್ತು ಅವಳ ರಾಜನ (ಆ ಮಗುವಿನ ಹೆಸರು ಮಾದ. ಆದರೆ ಸಿದ್ದಿ ಅವನನ್ನು "ರಾಜ" ನೆಂದೇ ಮುದ್ದು ಹೆಸರಿಟ್ಟು ಕರೆಯುವ ವಾಡಿಕೆ) ನೆನಪು ನನಗೆ ಬಾರದಿರದು. ಮನೆಯ ಮಕ್ಕಳಿಗೆ ಎರಡು ರೂಪಾಯಿಗೆ ಪಟಾಕಿ ಕೊಂಡರೆ, ಬಡಮಕ್ಕಳಿಗೆ ಐದು ರೂಪಾಯಿಗೆ ಪಟಾಕಿ ಮತ್ತಾಪು ಮುಂತಾದುವನ್ನು ಕೊಂಡು ತರುವುದು ನನ್ನ ವಾಡಿಕೆ. ಮೊಟ್ಟಮೊದಲು ಗೌಡರಕೇರಿಯ ಬಡ ಮಕ್ಕಳನ್ನು ಕರೆತರಿಸಿ ಅವಕ್ಕೆ ಪಟಾಕಿ ಮುಂತಾದುವನ್ನು ಹಂಚಿ "ಭಗವಂತ, ದಯಾಮಯ! ರಾಜನ ಆತ್ಮಕ್ಕೆ ಶಾಂತಿ ದಯಪಾಲಿಸಪ್ಪಾ" ಎಂದು ಪ್ರಾರ್ಥಿಸಿದ ಬಳಿಕವೇ ಮನೆಯ ಮಕ್ಕಳಿಗೆ ಪಟಾಕಿ ಹಂಚುವುದು ನನ್ನ ವಾಡಿಕೆ. ಇದೇ ನಾನು ಕೊಂಡಾಡುವ ದೀಪಾವಳೀ ವೈಭವ!

---

# ಅಚ್ಯುತನ ಹೆಂಡತಿ

ಈ ಸಲ ನನ್ನ ಗೆಳೆಯ ಅಚ್ಯುತನಿಗೆ ಮದುವೆಯಾಯಿತು. ಅದರಿಂದ ಅಚ್ಯುತನಿಗೆ ದೀಪಾವಳಿ ಹಬ್ಬಕ್ಕೆ ಮಾವನವರಿಂದ ಕರೆಬಂದಿತು. ಅವನೊಡನೆ ಅವನ ಅತ್ತೆಯ ಮನೆಗೆ ನಾನೂ ಹೋಗಬೇಕೆಂದು ನಿರ್ಧರವಾಯಿತು. ಅವನ ತಂದೆ "ಇನ್‌ಫ್ಲ್ಯುಯೆಂಜಾ" ಜ್ವರದಲ್ಲಿ ಬಹಳ ಖಾಯಿಲೆಯಾಗಿದ್ದು ಇದೇ ತಾನೆ ಸುಖ ಹೊಂದುತ್ತಿರುವರಾದುದರಿಂದ ಅವರೂ ಬರಲಾಗಲಿಲ್ಲ. ಅವರನ್ನು ಒಂಟಿಯಾಗಿ ಬಿಟ್ಟು ಅವರ ತಾಯಿಯೂ ಸಹ ಬರಲು ಸಾಧ್ಯವಾಗಲಿಲ್ಲವಾದುದರಿಂದ ನನ್ನ ಸರದಿ ಬಂದಿತು. ನಾನು ಅವನ ಮದುವೆಗೂ ಸಹ ಹೋಗಿರಲಿಲ್ಲ. ಆದುದರಿಂದ, ಇಷ್ಟರವರೆಗೆ ಅದೆಷ್ಟೋ ಸುಂದರ ಹುಡುಗಿಯರಲ್ಲಿಲ್ಲಾ ಲೋಪ ದೋಷ ಕಂಡು ಹಿಡಿಯುತ್ತಲಿದ್ದ ಈ ಬೃಹಸ್ಪತಿಯು ಕೊನೆಗೀಗ ಮನಪ್ಪೊಪ್ಪಿ ಮದುವೆಯಾಗಿರುವ ಆ ಹುಡುಗಿಯು ಹೇಗಿರುವಳೆಂದು ನೋಡಿಬಿಡಬೇಕೆಂದು ನನಗೆ ಒಳಗೊಳಗೇ ಆಸೆ ಮೂಡಿತ್ತಾದುದರಿಂದ ಅವನ ಜೊತೆಗೆ ಹೋಗಲು ಒಪ್ಪಿದೆ.

ದೀವಳಿಗೆಯಂದು ಮುಂಜಾನೆ ದಂಪತಿಗಳನ್ನು ಹಸೆಯ ಮೇಲೆ ಕುಳ್ಳಿರಿಸಿ ಆರತಿಯೆತ್ತಿ ಎಣ್ಣೆಶಾಸ್ತ್ರ ಮಾಡಿದಾಗಲೇ ನಾನು ಮೊಟ್ಟಮೊದಲು ಅಚ್ಯುತನ ಹೆಂಡತಿಯನ್ನು ಕಂಡದ್ದು. ತಕ್ಷಣ ನನ್ನ ಮನಸ್ಸಿನಲ್ಲಿ ಏಮಾರಿಕೆಯೂ, ಜಿಗುಪ್ಸೆಯೂ ತಲೆದೋರಿದುವು. ಆ ಹುಡುಗಿ ನಮ್ಮ ಅಚ್ಯುತನ ಅಂದ ಚಂದಕ್ಕೆ ಎಳ್ಳಷ್ಟೂ ಯೋಗ್ಯಳಲ್ಲವಲ್ಲಾ ಎಂದು ಪೇಚಾಡಿದೆ.

ಇಬ್ಬರೂ ಅಭ್ಯಂಜನ ಸ್ನಾನಮಾಡಿ, ಕಾಫೀ ಫಲಾಹಾರಾದಿಗಳನ್ನು ತೆಗೆದುಕೊಂಡು ಪೂರೈಸಿದ ಬಳಿಕ ಮಹಡಿಗೆ ಬಂದೆವು.

ಅಷ್ಟರವರೆಗೆ ನನ್ನ ಹೃದಯದಲ್ಲಿ ತಳಮಳಿಸುತ್ತಲಿದ್ದ ವೇದನೆಯು ಹೊರಹೊಮ್ಮಿತು.

"ಏನೋ ಅಚ್ಯುತ? ನಿನ್ನ 'ಚಾಯ್ಸ್' ಬ....ಹಾ...ಳ ಚೆನ್ನಾಗಿದೆಯಲ್ಲಾ! ಇಷ್ಟೊಂದು ದಿನ ಕಾದಿದ್ದೂ ಈ ರಂಭೆಯನ್ನೇ ಆರಿಸಿ ವರಿಸಿದೆ! ಬ...ಹಾ...ಳ ಚೆ....ನ್ನಾ....ಕಣೋ...ನಿನ್ನದೆಲ್ಲ! ಇಬ್ಬರೂ ಅಮಾವಾಸ್ಯೆ, ಹುಣ್ಣಿಮೆಯಂತಲ್ಲವೇ ಇರುವಿರಿ!" ಎಂದೆ.

"ಹೋಗೋ ದಡ್ಡ! ಸಂಜೆ ಉರುಟಣೆಯ ಸಮಯ ನೋಡು. ನನ್ನ ಚಾಯ್ಸ್. ಎಷ್ಟು ಉತ್ತಮ ತರಹದ್ದೆಂದು! ... ..." ಎಂದ ಅಚ್ಯುತ.

ಅದನ್ನೂ ನೋಡಿಬಿಟ್ಟರಾಯಿತು. ಏನೀಗ!" ಎಂದು ಯಾವಾಗ ಸಂಜೆಯಾದೀತೆಂದು ಇದಿರು ನೋಡುತ್ತಲಿದ್ದೆ.

* * * *

ಆಹಾಹಾ! ನಾನೂ ಎಷ್ಟೆಷ್ಟೋ ಸಂಗೀತ ಕಛೇರಿಗಳಿಗೆ ಹೋಗಿರುವೆನು. ಸುಪ್ರಸಿದ್ಧ ಎಷ್ಟೆಷ್ಟೋ ಸಂಗೀತ ವಿದ್ವಾಂಸರುಗಳ ಮತ್ತು ವಿದುಷಿಯರ ಸಂಗೀತ ಕೇಳಿದ್ದೇನೆ. ಆದರೆ.......ಆದರೆ ...ಹೌದು ಹೌದು ಅವರುಗಳ ಸಂಗೀತವು ಅಚ್ಯುತನ ಹೆಂಡತಿಯ ಕೋಕಿಲಗಾನಕ್ಕೆ ಸಮವಾಗುವುದೆ! ಅವಳ ಕೋಕಿಲ ಧ್ವನಿಯಿಂದ ತುಂಬಿ ಹರಿದು ಬರುವ ಗಂಧರ್ವ ಗಾನವು ಸಭಿಕರನ್ನು ಒಂದೇ ಸಮನಾಗಿ ಬೆರಗುಗೊಳಿಸಿ ತನ್ನ ವಶಪಡಿಸಿಕೊಂಡುಬಿಡುವದು. ಆ ಮಿನ್ನತ್ತು! ಆ ನಯ! ಇಂಪು! ನಿಜ ...ನಿಜ ...ಅಚ್ಯುತನೊಬ್ಬ ರಸಿಕ. ಅವಳ ಇಂಪು ಧ್ವನಿಯೂ, ಅದ್ಭುತ ಮಿನ್ನತ್ತಾದ ಗಂಧರ್ವ ಗಾನವೂ ಅವನನ್ನು ಅವಳ ಕಡೆಗೆ ಸೆಳೆದುದರಲ್ಲಿ ಆಶ್ಚರ್ಯವೇನು? ದೇವರು ಅಚ್ಯುತನನ್ನೂ— ಮಂಜುಳೆಯನ್ನೂ ಚಿರಾಯುಗಳಾಗಿರಿಸಲಿ!

ಬಿಳಿಯ ಚರ್ಮವೂ, ಉದ್ದನೆಯ ಕೇಶರಾಶಿಯೂ, ಹಂಸಗಮನವೂ ಮಾತ್ರವೇ ಸೌಂದರ್ಯವೆಂದು ಭಾವಿಸಿದ್ದನಲ್ಲ! ನಿಜವಾಗಿಯೂ ಸೌಂದರ್ಯವೆಂಬ ದೇವತೆಯು ಪ್ರತಿಯೊಬ್ಬರ ಹೃದಯ ಕಮಲದಲ್ಲಿಯೂ ವಾಸಿಸುತ್ತಿರುವಳಲ್ಲವೆ?

ಹೇವರಿದ್ದಾನೆ ನಮಗೇನಂತೆ ಚಿಂತೆ.... ..” ಎಂದು ಪತಿಯನ್ನು ಪ್ರೀತಿಯಿಂದ ತುಂಬಿದ ಕಣ್ಣುಗಳಿಂದ ನೋಡುತ್ತಾ ಅಡಿಗೆಯ ಮನೆಯೊಳಗೆ ಹೊರಟು ಹೋದಳು ಲಲಿತಾ ರಘುನಾಥನು ಮುಖವನ್ನು ಸ್ಪರಿಸಲಾರದೆ ನಿಂತಲ್ಲಿಯೇ ಪ್ರತಿಮೆಯಂತೆ ಬಹಳ ಹೊತ್ತಿನವರೆಗೆ ಕದಲದೆ ನಿಂತಿದ್ದ. ಅವನ ಕೈಯ ಲ್ಲಿದ್ದ ಕಾಗದವು ಕೈಯಿಂದ ಜಾರಿತು. ಅವನ ಕಣ್ಣುಗಳು ನಡುಮನೆಯ ಗೋಡೆಯ ಪಕ್ಕದಲ್ಲಿ ಇದ್ದ ಲಲಿತೆಯ ಹೊಲಿಗೆಯ ಯಂತ್ರವನ್ನೇ ದೃಷ್ಟಿಸುತ್ತ ಲಿದ್ದುವು.

ರಘುನಾಥನು ನ್ಯಾಯ ಪರೀಕ್ಷೆಯಲ್ಲುತ್ತೀರ್ಣನಾಗಿ ಮದರಾಸಿನಲ್ಲಿ ವಕೀಲನಾಗಿದ್ದನು. ಆದರೆ ಈಗಿನ ಕಾಲದಲ್ಲಿ ಹುತ್ತದಿಂದ ಇರುವೆಯ ಗುಂಪುಗಳು ಹೊರಡುವಂತೆ ಬೀದಿಗೆ ಹತ್ತು ವಕೀಲರು ಇದ್ದರೆ ವಕೀಲರ ಜೀವನ ಜರುಗುವುದೆಂತು? ಅವನ ತಂದೆ ತಾಯಿಲ್ಲದ ತಬ್ಬಲಿ ಮಗುವಾದ ಅವನನ್ನು ಬಹಳ ಮುದ್ದಾಗಿ ಬೆಳೆಸಿ, ತಮಗಿದ್ದ ಅಷ್ಟಿಷ್ಟು ಭೂಮಿ ಕಾಣಿಕೆ ಗಳನ್ನೂ ಮಾರಿ ಮದರಾಸಿನಲ್ಲಿ ಬಂದಿದ್ದುಕೊಂಡು ಓದಿಸಿದರು. ಬಳಿಕ ರಘುವು ಮನೆಯ ಮುಂದೆ ಹಲಗೆಯನ್ನು (Board) ತಗಲುಹಾಕುವುದರೊ ಳಗಾಗಿಯೇ ತನ್ನ ತಂಗಿಯ ಮುದ್ದುಗುವರಿ ಲಲಿತೆಯನ್ನು ತಂದುಕೊಂಡು ಮಗನಿಗೆ ಮದುವೆಯನ್ನೂ ಮಾಡಿಬಿಟ್ಟರು. ರಘುವಿಗೆ ಮದುವೆಯಾದ ವರ್ಷವೇ ಮುದುಕರು ಕಣ್ಣು ಮುಚ್ಚಿಕೊಂಡರು. ಲಲಿತೆಯ ತಾಯಿ ಚಿಕ್ಕ ವಯಸ್ಸಿನಲ್ಲಿಯೇ ಕಾಲವಾಗಿಹೋದಳು. ಸುಗುಣವತಿ, ಸದ್ಗೃಹಿಣಿ. ಅವಳ ಸದ್ಗುಣಗಳೂ, ಲಾವಣ್ಯವೂ ಲಲಿತೆಯಲ್ಲಿ ಪ್ರತಿಬಿಂಬಿತವಾಗಿದ್ದ ವೆಂದರೆ ತಪ್ಪಾಗಲಾರದು. ರಘುವಿಗೆ ಪ್ರಾರಂಭದಲ್ಲಿ ಸುಮಾರಾಗಿ ವರಮಾ ನವು ಬರುತ್ತಿದ್ದರೂ ಮಧ್ಯೆ ಮದರಾಸಿನಲ್ಲಿ ಯುದ್ಧ ಭಯವೇರ್ಪಟ್ಟು ಅಲ್ಲೋ ಲಕಲ್ಲೋಲವಾದಾಗ ರಘುನಾಥನು ಯುದ್ಧ ಭೀತಿಗಾಗಿ ಮದರಾಸನ್ನು ಕೆಲ ಕಾಲ ಬಿಟ್ಟುಹೋಗಿ ಬಂದುದರಲ್ಲಿ ಬಹಳ ಹಣ ವೆಚ್ಚವಾಯಿತಲ್ಲದೆ ಹಳೆಯ ಕಕ್ಷಿಗಾರರ ಪತ್ತೆಯೇ ಇಲ್ಲದೆಹೋಗಿ ಉದ್ಯೋಗವು ಬಹು ಕಠಿಣ ಪರೆಯನ್ನು ತಾಳಿತು. ದಿನ ದಿನಕ್ಕೆ ಮನೆಯ ಸಾಮಾನುಗಳನ್ನೂ, ಒಡವೆ ವಸ್ತುಗಳನ್ನೂ ಮಾರಬೇಕಾದ ಅಗತ್ಯವೂ ಒದಗಿ ಕೊನೆಗೆ ಮನೆಯಲ್ಲಿ ಉಳಿದಿದ್ದ ಲಲಿತೆಯ ತಾಯಿಯಿಂದ ಲಲಿತೆಗೆಂದು ಬಂದಿದ್ದ ಉಡುಗೊರೆಯಾದ ಹೊಲಿಗೆಯ

ಯಂತ್ರಕ್ಕೆ ಗ್ರಹಚಾರ ಬಂದಿತು. ರಘುನಾಥನು ಈ ಹಾಳು ವಕೀಲ ವೃತ್ತಿಗೆ ತಿಲಾಂಜಲಿ ಬಿಟ್ಟು ಬೇರೆ ಯಾವುದಾದರೊಂದು ಕೆಲಸಕ್ಕೆ ಸೇರಿ ಬಿಡೋಣವೆಂದು ಅದೆಷ್ಟೋ ಹುಡುಕಿ ನೋಡಿದನು. ಯಾವುದೂ ದೊರಕುವ ಸಂಭವ ತೋರಲಿಲ್ಲ. ಲಲಿತೆ ಹೊಲಿಗೆಯ ಕೆಲಸದಲ್ಲಿ ಬಹು ಜಾಣೆ. ಆವಳು ನೆರೆ ಹೊರೆಯ ಹೆಣ್ಣು ಮಕ್ಕಳಿಗೆ ಚಿನ್ನ ಹೊಲಿಗೆಯ ಯಂತ್ರದ ಮೂಲಕ ಒಪ್ಪ ಹೊಲಿದುಕೊಟ್ಟು ಸಂಪಾದಿಸುತ್ತಿದ್ದ ಹಣವು ತತ್ಕಾಲದಲ್ಲಿ ಆ ಕುಟುಂಬಕ್ಕೆ ಬಹಳ ಸಹಾಯವಾಗಿತ್ತು. ಏತನ್ಮಧ್ಯೆ ತಮರ ಮುದ್ದು ಮಗಳು ಶಶಿಕಲೆಗೆ ವಿವಾಹ ವಯಸ್ಸು ಪ್ರಾಪ್ತವಾಗಲು, ರಘುವು ಕೆಲಸ ಹುಡುಕುವ ಕಾರ್ಯದ ಜೊತೆಗೆ ವರನ ಬೇಟೆಗೂ ಹೊರಡಬೇಕಾಗಿಬಂದಿತು. ವರನಿಗೆ ಅದೆಷ್ಟೋ ಹುಡುಕಿದ ಬಳಿಕ ಮುಂಬಯಿನ ಕಾಂಟ್ರಾಕ್ಟರ ಆಫೀಸಿನಲ್ಲಿ ತಿಂಗಳಿಗೆ ಅರವತ್ತು ರೂ. ಸಂಬಳದಲ್ಲಿ ಬಿ.ಎ ಪರೀಕ್ಷೆಯಲ್ಲಿ ಉತ್ತೀರ್ಣನಾದ ವರನೊಬ್ಬನು ದೊರಕಿದನು. ಹುಡುಗನ ತಾಯಿಯು ಕೊನೆಯ ಪಕ್ಷ ೫೦೦ ರೂಪಾಯಿಗಳಾದರೂ ವರದಕ್ಷಿಣೆ ಕೊಟ್ಟರೆ ನೀ ಹುಡುಗಿಯನ್ನು ತನ್ನ ಮಗನಿಗೆ ಮದುವೆ ಮಾಡಿಕೊಳ್ಳಲು ಸಾಧ್ಯವೆಂದು ಖಂಡಿತವಾಗಿಯೂ ಅಂದು ಬಿಟ್ಟಳು. ಬಡಪಾಯಿ ರಘುವು ಇಷ್ಟೊಂದು ರೊಕ್ಕಕ್ಕೆ ಎಲ್ಲಿ ಹೋದಾನು? ಆತನ ಗೆಳೆಯ ಇಂಜನಿಯರ್ ಶ್ರೀಧರನು ಕೆಲವು ದಿನಗಳಿಂದ ತನ್ನ ಹೆಂಡತಿಗೊಂದು ಕಡಿಮೆ ಬೆಲೆಯ ಹೊಲಿಯುವ ಯಂತ್ರ ಹಳೆಯದಾದರೂ ಚೆನ್ನಾಗಿರುವುದು ಕೊಂಡುಕೊಡಬೇಕೆಂದು ಹೇಳುತ್ತಿದ್ದುದನ್ನು, ರಘುವು ಒಂದು ಸಲ ಲಲಿತೆಯ ಬಳಿ ಸುಮ್ಮನೆ ಹೇಳಿದ್ದನು. ಅದನ್ನೀಗ ಲಲಿತೆಯು ಜ್ಞಾಪಿಸಿಕೊಂಡು ಗಂಡನನ್ನು ತನ್ನ ಹೊಲಿಗೆಯ ಯಂತ್ರವನ್ನು ಶ್ರೀಧರನಿಗೆ ಮಾರಿ, ಬಂದ ಹಣದಲ್ಲಿ ಶಶಿಕಲೆಯ ಮದುವೆಯನ್ನು ನೆರವೇರಿಸಬೇಕೆಂದು ಒತ್ತಾಯ ಮಾಡಿದಳು.

ಮರುದಿನ ಮುಂಜಾನೆ ಲಲಿತೆಯೆದ್ದು ಸ್ನಾನಮಾಡಿ ಮಡಿಯುಟ್ಟು, ಹೊಲಿಗೆಯ ಯಂತ್ರಕ್ಕೆ ಅರಸಿನ ಕುಂಕುಮ ಹಚ್ಚಿ, ಹೂವುಗಳಿಂದ ಪೂಜಿಸಿ, ನಮಸ್ಕರಿಸಿ ಅದರ ಮುಂದೆ ಕೈಜೋಡಿಸಿ ನಿಂತವಳಾಗಿ "ನನ್ನ ತಾಯೀ, ಭಗವತೀ ಮಹಾಲಕ್ಷ್ಮೀ, ನಾನು ನನ್ನ ತಾಯಿಯನ್ನು ಅಗಲಿದಂದಿನಿಂದಲೂ ಮತ್ತು ನಾನು ನನ್ನ ಅತ್ತೆಯ ಮನೆಗೆ ಬಂದಮೇಲೂ ಯಾವಾಗಲೂ ಎಡೆ

ಬಿಡದೆ ನನ್ನ ಒಡಹುಟ್ಟಿದ ಸಹೋದರಿಯಂತೆ ನನ್ನೊಡನೆ ಇದ್ದು ನನಗೆ ಎಷ್ಟೊಂದು ಸಹಾಯ ಮಾಡಿರುವೆ! ನಾನು ನನ್ನ ತಾಯನ್ನು ಸಹ ನೋಡಿಲ್ಲ! ನೀನೇ ನನಗೆ ತಾಯಿ, ತಂಗಿ, ಅಕ್ಕ, ಎಲ್ಲ ಬಳಗವೂ ಆಗಿದ್ದೆಯಲ್ಲಾ. ನಿನ್ನನ್ನು ಹೇಗೆ ಅಗಲಲಿ ತಾಯಿ! ನಿನ್ನ ತಂಗಿಯ ಮಗಳ ಮದುವೆಗಾಗಿ ನನ್ನನಗಲಿ ಹೋಗುವೆಯಾ, ಕರುಣಾಮಯೀ! ನೀನಲ್ಲವೇ ಆದರ್ಶ ವಸ್ತು! ನನ್ನ ಮಗುವನ್ನು ಆಶೀರ್ವದಿಸಿ ಇಷ್ಟು ದಿನ ನನ್ನ ಕುಟುಂಬವನ್ನಾದರಿಸಿ ದಂತೆಯೇ ಮುಂದೆಯೂ ಆದರಿಸು ತಾಯೀ" ಎಂದು ಬಾಯಿಬಿಟ್ಟು ಹೇಳುತ್ತಾ ಕಣ್ಣೀರು ಸುರಿಸಿದಳು. ಅಷ್ಟರಲ್ಲೇ ಹಾಸಿಗೆಯಿಂದೆದ್ದು ಬಂದ ರಘು ಈ ದೃಶ್ಯ ವನ್ನು ಕಂಡು ದುಃಖಾವೇಗದಲ್ಲಿ ಗೋಳಾಡುತ್ತಿದ್ದ ಪತ್ನಿಯ ಬಳಿಯಲ್ಲಿ ಬಂದು ನಿಂತು ತಾನೂ ಆ ಯಂತ್ರಲಕ್ಷ್ಮಿಗೆ ಕಣ್ಣೀರು ಸುರಿಸುತ್ತಾ ಕೈಮುಗಿದನು.

ಮಾರನೆ ದಿನ ರಘುವಿನ ಮನೆಯ ಯಂತ್ರಲಕ್ಷ್ಮಿಯು ಶ್ರೀಧರನ ಮನೆಯನ್ನು ಹೊಕ್ಕಳು. ರಘುವಿನ ಕೈಗೆ ನಾನೂರೈವತ್ತು ರೂಪಾಯಿಗಳು ಬಂದು ಸೇರಿತು. ಆ ದಿನ ರಘುವಿನ ಮನೆಯಲ್ಲಿ ಶೋಕದ ಛಾಯೆ ತುಂಬಿ, ಮನೆಯಲ್ಲಿ ಯಾರ ಬಾಯಿಂದಲೂ ಒಂದು ಮಾತೂ ಸಹ ಹೊರಡದಂತಾಯಿತು. ಸಂಜೆ ಆರು ಘಂಟೆಯ ಸಮಯ. ರಘು ಮನೆಯ ಮುಂದಿನ ಹಜಾರದಲ್ಲಿ ಸುಮ್ಮನೆ ಬೆಪ್ಪು ಬೆಪ್ಪಾಗಿ ಕುಳಿತಿದ್ದನು. ಲಲಿತೆಯು ಅಡಿಗೆಯ ಮನೆಯಲ್ಲಿ ಕುಳಿತಿದ್ದಳು. ಪಂಕಜಳು ಗೆಳತಿಯ ಮನೆಗೆ ಹೋಗಿದ್ದಳು.

ಆಗ ಶ್ರೀಧರನ ಮನೆಯ ಆಳೊಬ್ಬನು ಬಂದು ರಘುನಾಥನ ಕೈಯಲ್ಲೊಂದು ದೊಡ್ಡ ಲಕೋಟೆಯನ್ನೂ ಕಾಗದವೊಂದನ್ನೂ ಕೊಟ್ಟು, ಒಂದು ಕಾಗದದಲ್ಲಿ ಅವನ ರುಜು ಹಾಕಿಸಿಕೊಂಡು ಹೋದನು. ಲಕೋಟೆಯನ್ನು ಬಿಚ್ಚಿ ನೋಡಲಾಗಿ ಅದರ ತುಂಬ ರೂಪಾಯಿ ನೋಟುಗಳು ತುರುಕಲ್ಪಟ್ಟಿದ್ದವು. ಜೊತೆಗೊಂದು ಕಾಗದ ಇದ್ದಿತು. ಜವಾನ ಕೊಟ್ಟ ಕಾಗದದಲ್ಲಿ ಕೆಳಗೆ ಕಂಡಂತೆ ಬರೆಯಲ್ಪಟ್ಟಿತ್ತು.

"ಪ್ರಿಯ ಗೆಳೆಯ, ಯಂತ್ರದ ತುಕ್ಕು ಹಿಡಿದಿದ್ದ ಆ ಸಾಮಾನು ಪೆಟ್ಟಿಗೆಯ ಮುಚ್ಚಳವನ್ನು ಏನೇನೋ ಮಾಡಿ ಬಹಳ ಶ್ರಮಪಟ್ಟು ತೆಗೆದೆ. ಅದ

ರಲ್ಲಿ ಈ ಲಕೋಟೆಯೂ ಕಾಗದವೂ ಇದ್ದಿತು. ಲಕೋಟೆಯನ್ನು ಒಡೆದು ನೋಡಲಾಗಿ ಎರಡು ಸಾವಿರದ ಮೂರುನೂರಏಳು ರೂಪಾಯಿಗಳೂ ಹದಿನೈದಾಣೆಗಳೂ ಇದ್ದವು. ಹಣ ತೆಗೆದುಕೊಂಡದ್ದಕ್ಕೆ ನಿನ್ನ ರುಜು ಹಾಕಿ ಬರೆದು ಕಳಿಸು, ಶ್ರೀಧರ" ಎಂದಿತ್ತು.

ಅಷ್ಟರೊಳಗಾಗಿ ಲಲಿತೆಯು ಏನೋ ಕೆಲಸವಾಗಿ ಬೀದಿಗೆ ಬಂದಳು. ರಘುವು "ಲಲಿತಾ, ಇದೋ ನಿಮ್ಮಕ್ಕನು ನಿನಗೆ ದೊಡ್ಡದೊಂದು ಸಹಾಯ ಮಾಡಿರುವಳು!" ಎಂದು ಆ ಲಕೋಟೆಯನ್ನೂ ಕಾಗದವನ್ನೂ ಅತ್ಯಾನಂದದಿಂದ ಮಡದಿಯ ಕೈಯಲ್ಲಿತ್ತನು.

"ಇದೇನು! ನನಗರ್ಥವಾಗಲಿಲ್ಲವಲ್ಲಾ" ಎಂದಳು. ರಘುವು ಮುಗುಳ್ನಗೆಯಿಂದ ಸುಧಾರಿಸಿಕೊಂಡು ಅವಳ ಕೈಯಲ್ಲಿ ಕೊಟ್ಟು, ಕಾಗದವನ್ನು ಓದಲಾರಂಭಿಸಿದನು.

"ನನ್ನ ಕಂದಾ, ಲಲಿತ! ನಾನು ಸ್ವಲ್ಪ ಸ್ವಲ್ಪವಾಗಿ ಕೂಡಿಟ್ಟ ಹಣವೆಲ್ಲವನ್ನೂ ಎಂದರೆ ಎರಡು ಸಾವಿರದ ಮೂರುನೂರು ಏಳು ರೂ. ಹದಿನೈದಾಣೆ. ಇವನ್ನು ನನ್ನ ಹೊಲಿಗೆಯ ಯಂತ್ರದ ಸಣ್ಣ ಪೆಟ್ಟಿಗೆಯಲ್ಲಿಟ್ಟು ಭದ್ರವಾಗಿ ಮುಚ್ಚಿಟ್ಟಿರುವೆನು. ಇದರಲ್ಲಿರುವುದು ತಿಳಿದರೆ ನಿನ್ನ ತಂದೆ ಅನ್ಯಾಯವಾಗಿ ದುಂದು ವೆಚ್ಚಮಾಡಿಬಿಡುವರು. ಅವರ ದುಂದು ವೆಚ್ಚವನ್ನು ಲೋಕವೇ ಅರಿವುದಲ್ಲಾ. ಆದುದರಿಂದಲೇ ನಿನಗೆಂದು ರಹಸ್ಯವಾಗಿ ಬಚ್ಚಿಟ್ಟಿರುವೆನು. ನನ್ನ ಅಂತ್ಯಕಾಲವು ಸಮೀಪಿಸುತ್ತಲಿದೆ. ನಿನ್ನ ತಬ್ಬಲಿ ಮಗುವಿಗೆ ಈ ಹಣವೂ ಈ ಯಂತ್ರವೂ ನಾನಿಟ್ಟು ಹೋಗುವ ಉಡುಗೊರೆ.

ಇತಿ, ನಿನ್ನ ಪ್ರಿಯಮಾತೆ,

—ಶಕುಂತಳೆ.

ಮರುದಿನವೇ ರಘುವಿನ ಮನೆಯ ಯಂತ್ರಲಕ್ಷ್ಮಿಯು ಮರಳಿ ಬಂದಳು. ಲಲಿತೆಯ ಹಂಬಲ ಈಡೇರಿಸಿದಳು.

# ಮೀನಾಕ್ಷಿಯ ಡೈರಿ

ತಾ|| ೭—೨.. ....

"ಅಮ್ಮಾ! ನೀನೇಕೆ ನನ್ನನ್ನು ನಿನ್ನ ಜೊತೆಗೆ ಕರೆದುಕೊಂಡು ಹೋಗಲಿಲ್ಲ. ನಾನಿಲ್ಲಿ ಪಡುವ ಕಷ್ಟ ನಿನಗೆಲ್ಲಿ ಗೊತ್ತಾಗಬೇಕು. ನಾನೊಬ್ಬ ತಾಯಿಲ್ಲದ ತಬ್ಬಲಿ ಎಂದೇನೋ ದೊಡ್ಡಮ್ಮ ತುಳಸಿ ಎಲ್ಲ ಹೀಗೆ ತಿರಸ್ಕಾರ ದೃಷ್ಟಿಯಿಂದ ಕಾಣುತ್ತಾರೆ. ತುಳಸಿ ಮಾತ್ರ "ಹಂ" ಎಂದು ಹೊಸ ಸೀರೆ ಉಟ್ಟುಕೊಂಡು ಮೆರೆಯಬೇಕಂತೆ, ನಾನಂತೂ ಅವಳು ಉಟ್ಟು ಉಟ್ಟು ಹರಿದು ಬಿಟ್ಟ ಹರಕಲು ಸೀರೆಗಳನ್ನು ಉಟ್ಟುಕೊಳ್ಳಬೇಕು. ಇನ್ನು ಅದೆಷ್ಟು ಕಷ್ಟ ಪ್ರಸಂಗಗಳು ನಡೆಯುತ್ತಿವೆ ಲೆಕ್ಕವಿಟ್ಟವರಾರು? ತಾಯೀ, ಚಾಮುಂಡೇಶ್ವರೀ, ನಿನ್ನನ್ನೇ ನಂಬಿದ್ದೇನೆ"

ತಾ|| ೧೫ - ೨ .....

"ಈ ಹೊತ್ತು ದೊಡ್ಡಮ್ಮ, ತುಳಸಿ ಎಲ್ಲ ಸಿನೀಮಾಕ್ಕೆ ಹೋದರಲ್ಲಾ. ದೊಡ್ಡಪ್ಪ ಬಂದು "ಯಾಕೆ, ಮೀನಾಕ್ಷಿಯನ್ನು ಕರೆದುಕೊಂಡು ಹೋಗಲಿಲ್ಲವೆ?" ಎಂದು ಕೇಳಿದುದಕ್ಕೆ, ದೊಡ್ಡಮ್ಮನು "ಅವಳಿಗೆ ತಲೆನೋವಂತೆ. ಬರುವುದಿಲ್ಲವೆಂದಳು" ಎಂದು ಬುರುಡೆ ಬಿಟ್ಟಳಲ್ಲ! ಹೀಗೂ ಕೂಡ ಇಷ್ಟೊಂದು ದೊಡ್ಡವಳು ಕೊಂಚವೂ ಸಂ[illegible] ಸುಳ್ಳು ಹೇಳಿದಳಲ್ಲಾ ನಾನೇನು ಮಾಡಲಿ? ಮಧ್ಯೆ ಮಾತನಾಡಿದರೆ, ತಲೆ ಬುರುಡೆ ಒಡೆದು ಬಿಡುವಳಲ್ಲಾ............ಛೀ ....... ...ಛೀ .. .. ...ನನಗೇಕೆ ಈ ಆಸೆಯಿಲ್ಲ. ಒಲೆಯ ಮುಂದೆ "ಸಿಂಡರ್‌ಲಾ" ಯಂತೆ ಬಿದ್ದಿರುವುದೇ ನನ್ನ ಹಣೆಯ ಬರಹ.... .."

ತಾ|| ೨೦—೩........

"ಈ ಡೈರಿಯನ್ನಾದರೂ ತಮಾಷೆಯಾಗಿ ಪ್ರತಿ ನಿತ್ಯವೂ ಬರೆಯೋಣವೆಂದರೆ, ಅದಕ್ಕೂ ಸಹ ಅವಕಾಶವಿಲ್ಲ. ನಮ್ಮ ಸೀನಣ್ಣ (ಮೀನಾಕ್ಷಿಯ ಸೋದರತ್ತೆಯ ಮಗ) ನಂತೂ ಪಕ್ಷಪಾತವಿಲ್ಲದೆ ನನಗೂ, ತುಳಸಿಗೂ ಒಂದೇ

ಮೊದಲಿಯಲ್ಲಿ ಹೊಸ ವರ್ಷದ ಉಡುಗೊರೆಯೆಂದು, ಪಾಪ, ಇಂಗ್ಲೆಂಡಿನಿಂದ ಈ ಡೈರಿಯನ್ನು ಕಳುಹಿಸಿದ್ದಾರೆ. ತುಳಸಿಯಂತೂ ಅವನ್ನು ಅಲಕ್ಷ್ಯವಾಗಿ ಮೂಲೆಗೊತ್ತರಿಸಿಬಿಟ್ಟಿದ್ದಾಳೆ. ನಾನಾದರೂ ನನ್ನದನ್ನು ಹಾಳುಮಾಡದೆ ಸದುಪಯೋಗಪಡಿಸೋಣವೆಂದರೆ ಅವಕಾಶವಂತೂ ಸಿಗುವುದಿಲ್ಲವಲ್ಲಾ ಇನ್ನೂ ಹತ್ತು ಘಂಟೆ ಸಹ ಹೊಡೆಯಲಿಲ್ಲ. ನಾನರ್ಥಗಳಿಗೆ ದೀಪ ಉರಿಸಿ ದರೆ ಚಾರ್ಜ್ ಜಾಸ್ತಿಯಾಗಿಬಿಡುವುದಂತಲ್ಲ! ಅಗೋ, ದೊಡ್ಡಮ್ಮನು ಮಲು ಗಿದಂತೆಯೇ ರೇಗುತ್ತಾಳೆ. ಸರಿ, ಈ ಹೊತ್ತು ಇನ್ನು ಡೈರಿ ಬರೆಯಲು ಅನುಮತಿಯಿಲ್ಲ, ಅವಕಾಶವೂ ಇಲ್ಲ.

ತಾ॥ ೨—೬ ......

ವರ್ಷಕ್ಕೆರಡು ಸಲವಂತೆ ನಾ ಡೈರಿ ಬರೆಯುವ ಚಂದವೋ ಚಂದ! ಶೀನಣ್ಣ ಇನ್ನೆರಡು ತಿಂಗಳೊಳಗಾಗಿಯೇ ಬರುತ್ತಾರಂತೆ! ಅಬ್ಬಬ್ಬಾ ದೊಡ್ಡಮ್ಮನಿಗೆ ಹೆಮ್ಮೆಯೋ ಹೆಮ್ಮೆ! ತನ್ನ ಅಳಿಯನಾಗುವುದರೊಳಗಾ ಗಿಯೇ ಹೀಗೊಬ್ಬಳು "ನನ್ನ ಅಳಿಯ ವಿಲಾಯಿತಿಯಿಂದ ಬರುತ್ತಾರೆ, ಬರು ತ್ತಾರೆಂದು'' ಎಲ್ಲಾದರೂ ಜಂಭ ಕೊಚ್ಚಿಕೊಳ್ಳುವುದುಂಟೇ! ತುಳಸಿಗಂತೂ ಬರು ಬರುತ್ತಾ ಬಲು ಜಂಭ ತಾನೊಬ್ಬ ಲೇಡಿ ಆದಂತಲ್ಲವೇ ಗರ್ವ! ಅವ ಳಿಗೆ ನನ್ನ ಮುಖನೋಡಿ ಮಾತನಾಡುವುದಕ್ಕೂ ಸಹ ಅಸಹ್ಯ. ಓಹೋಹೋ! ಇಂಗ್ಲಿಷ್ ಕಲಿಯಲೊಬ್ಬ 'ಮ್ಯಾಡಂ' ಏನು! ಹಾಡಿಗೊಬ್ಬ ಮೇಷ್ಟ್ರೇನು! ಹೊಲಿಗೆಯ ಟೀಚರೇನು! ಮಜಾ ಮಾಡಲಿ, ಮಜಾ ಮಾಡಲಿ! ನಾನೇಕೆ ಅಸೂಯೆ ಪಡಬೇಕು. ಒಲೆ ಊದಿ ಸೊತ್ತಿಸಲಂತೂ ನನಗೆ ದೇವರು ಎರಡು ಕೆನ್ನೆಗಳನ್ನಾದರೂ ದಯಪಾಲಿಸಿರುವನಲ್ಲ! ಅಷ್ಟೇ ಸಾಕು. ಲೋಕ ಹಲವು ರೀತಿಯದು!! ನಿದ್ರೆ, ಕಣ್ಣನ್ನು ಎಳೆಯುತ್ತದೆ. ಇಷ್ಟೇ ಇದೆ ಸಲ್ಲವ! ಬೆಳ ಗೆದ್ದರೆ ಗಾಣದ ಎತ್ತಿನಂತೆ ದುಡಿಯಲು ಈ ಜನ್ಮವಿದೆಯಲ್ಲಾ!

ತಾ॥ ೧೫— ೯........

"ಒಹೋಹೋ! ಸೀನಣ್ಣ ಇನ್ನು ಹದಿನೈದೇ ದಿನಗಳಲ್ಲಿ ಬರುತ್ತಾ ರಂತೆ! ಮನೆಯಲ್ಲಂತೂ ಸಡಗರವೋ ಸಡಗರ! ಇದರಿಂದ ಯಾರಿಗೆಂತಹ ಶ್ರಮ? ನಾನಂತೂ ಇರುವೆನಲ್ಲ ದುಡಿಯಲು. ಅಯ್ಯೋ! ಭಕ್ಷ್ಯಗಳ

ಗಾಗಿ ಹಿಟ್ಟು ಬೀಸಿ, ಬೀಸಿ, ಅಂಗೈಯೆಲ್ಲ ಬೊಬ್ಬೆ ಎದ್ದುಬಿಟ್ಟಿದೆ. ಹಪ್ಪಳ, ಸಂಡಿಗೆಗೆಂದು ಅಕ್ಕಿ ಹುರಿದು, ಕುರಿದು, ಹೊಗೆ ಕುಡಿದು ಕುಡಿದು ತಲೆ ತಿರುಗುತ್ತಿದೆ ನನಗೇನಾದರೇನಂತೆ. ಕೇಳುವವರಾರು ? ದೊಡ್ಡಪ್ಪನವರೊಬ್ಬರು ಏನಾದರೂ ಪ್ರೀತಿಯಾಗಿ ಕೇಳಲು ಬಂದರೆ, ದೊಡ್ಡಮ್ಮನಂತೂ "ಪೋಲೀಸ್ ವಾರಂಟಂತೆ" ಅವರನ್ನು ಹಿಂಬಾಲಿಸಿ, ನನಗೆ ಬದಲು ಅವಳೇ ಉತ್ತರ ಹೇಳಿಬಿಡುತ್ತಾರಲ್ಲಾ! ನಾ ಹೇಳಲು ಅವಕಾಶವೆಲ್ಲಿಯದು ? ಅಯ್ಯೋ! ಸೊಂಟ ಮುರಿದುಹೋಗುತ್ತೆ, ನೋವು ದೀಪ ಆರಿಸಿ, ಮಲಗೋಣ.

೨೫—೯........

"ನಾಳೆಯ ಬೆಳಗಿನ ಗಾಡಿಯಲ್ಲಿ ಸೋದರತ್ತೆ, ಭಾವ, ಸೀನಣ್ಣ ಎಲ್ಲರೂ ಬರುತ್ತಾರಂತೆ. ಸೋದರತ್ತೆಯೂ, ಭಾವನವರೂ ದೆಹಲಿಯಿಂದ ಬೊಂಬಾಯಿಗೆ ಹೋಗಿ, ಮಗನಿಗೆ ಬಂದರಿನಿಂದಲೇ ಸುಖಾಗಮನ ಬಯಸಿ, ಕರೆತರುತ್ತಾರಂತೆ! ಊಂ....ನನಗೂ ತಾಯಿ ತಂದೆ ಇದ್ದಿದ್ದರೆ, ಈ ರೀತಿ ಇದ್ದಿದ್ದರೆ, ಈ ರೀತಿಯಾಗಿ ಬಳಲದೆ ನಂದನದ ಹೂವಾಗಿ, ದುಡಿಯದೆ, ತಾಯಿ ತಂದೆಯ ಮುದ್ದುಗುವರಿಯಾಗಿ ಇರುತ್ತಿದ್ದೆನಲ್ಲ. ಎಲ್ಲ ನನ್ನ ಹಣೆಯ ಬರಹ, ಯಾರೇನು ಮಾಡಿಯಾರು. ಸರಿ, ಅದಿರಲಿ. ನಾಳೆ, ಅವರೆಲ್ಲ ಬಂದರೆ ಅವರೆದುರಿಗೆಲ್ಲ ಈ ಹರಕಲು ಸೀರೆಯನ್ನೇ ಉಟ್ಟುಕೊಂಡು ಹೇಗೆ ಓಡಾಡಲಿ ? ಅಯ್ಯೋ! ನಾಚಿಗೆಗೇಡು. ಕೈ ನಡುಗುತ್ತದೆ. ಮುಂದೆ ಬರೆಯಲಾರೆ.......ಊಂ...........ದೊಡ್ಡಮ್ಮನ ಮಗಳಿಗೆ ಮಾತ್ರ 'ಜಂ' ಎಂದು ಜರತಾರೀ ಸೀರೆಯುಡಿಸಿ, ಸಿಂಗರಿಸುತ್ತಾಳೆ. ಇರಲೇನೀಗ............ ನಾನೇ ಮತ್ತೆ ಮದುವೆಯ ಹುಡುಗಿ ?

ತಾ|| ೨೮—೧೦........

"ತಾಯಿ! ಚಾಮುಂಡಾಂಬಿಕೇ! ನಾನು ಕನಸಿನಲ್ಲಿಯೂ ಸಹ ನೆನೆಸದ ಅದೃಷ್ಟವನ್ನೀಗ ನನಗೆ ದಯಪಾಲಿಸಿಬಿಟ್ಟೆಯಲ್ಲ! ಬರೆಯಲು ಕೈ ಓಡುವುದಿಲ್ಲ!........ಶೀನಣ್ಣ ನನ್ನನ್ನೇ ಮದುವೆಯಾಗುತ್ತೇನೆಂದು ಖಂಡಿತವಾಗಿ ಹೇಳಿಬಿಟ್ಟರಂತಲ್ಲ! ದೊಡ್ಡಮ್ಮನೂ ಮತ್ತು ತುಳಸಿಯೂ ಮುಖ ಚಿಕ್ಕದುಮಾಡಿಕೊಂಡುಬಿಟ್ಟರು ಪಾಪ! ನನ್ನಲ್ಲಿ ಅದೇನನ್ನು ಕಂಡರೋ,

ಈ ಶೀನಣ್ಣ ನಾನರಿಯೆ ! ಈ ಬಡವಳ ಮೇಲೆ ಪ್ರೇಮವಿಟ್ಟ ಅವರಿಗೆ ಅನಂತಾನಂತ ವಂದನೆಗಳು. ನಾಳೆಯ ದಿನ ಅವರಿಲ್ಲ ನನ್ನನ್ನೂ ಜೊತೆಗೆ ಕರೆದು ಕೊಂಡು ದೆಹಲಿಗೆ ಹೊರಡುತ್ತಾರಂತೆ. ಅಲ್ಲಿಗೆ ಹೋದ ಬಳಿಕ ಸೋದರತ್ತೆ ನನಗೆ ಇಂಗ್ಲೀಷ್ ಮೇಷ್ಟ್ರು, ಹಾಡಿನ ಮೇಷ್ಟ್ರು ಎಲ್ಲ ಗೊತ್ತುಮಾಡುತ್ತಾರಂತೆ ಬರುವ ಜನವರೀ ತಿಂಗಳು ನಾಲ್ಕನೇ ತಾರೀಖು ನಮ್ಮ ವಿವಾಹ ಮುಹೂರ್ತವೆಂದು ನಿಶ್ಚಯ ಮಾಡಿಬಿಟ್ಟರು !

"ತಾಯೀ, ಚಾಮುಂಡಾಂಬಿಕೆ....ಇನ್ನು ಮುಂದೆ ಬರೆಯಲಾರೆ !!!.... ಆನಂದದಿಂದ ಕೈ ಓಡುವುದಿಲ್ಲ.

---

# ಇದು ಸಹಜ!

"ಏನ್ರೀ ಸೋದರತ್ತೆ ! ನಿಮ್ಮ ಸೊಸೆಗೆ ಏನಾಗಿತ್ತು ಪಾಪ ?..........."
ಎಂದನ್ನುತ್ತಾ ನರಸಮ್ಮನು ಒಳಗೆ ನುಗ್ಗಿದಳು.

"ಅವಳಿಗೇ ಮತ್ತೆ ಬೆಟ್ಟದಂತಹ ಚಿಂತೆ ಬಂತಲ್ಲವಮ್ಮಾ. ಆ ದುಃಖದಲ್ಲೇ ಹಲುಬಿ ಹಲುಬಿ ಹಾಸಿಗೆ ಹಿಡಿದು ಬಿಟ್ಟಳು ಮಹಾರಾಯಗಿತ್ತಿ. ಅದೇ ಯಮನಾಗಿ ಪರಿಣಮಿಸಬೇಕೇ ನಾನೇನ ಮಾಡಲಿ ನರಸು? ಅವಳಂತಹ ಚಿನ್ನದಂತಹ ಸೊಸೆಯನ್ನು ನಾ ಕಂಡಿಲ್ಲ ಕಣೆ" ಎಂದು ಸುಬ್ಬಮ್ಮನು ಕಣ್ಣೀರು ಸುರಿಸತೊಡಗಿದಳು." ಬೆಳಗಾದರೆ ದೀಪಾವಳಿ. ಅಳಿಯ ಬರುತ್ತಾನೆ, ಅಳಿಯ ಬರುತ್ತಾನೆಂದು ಆಸೆ ಆಸೆಯಾಗಿ ಅದೆಷ್ಟು ಭಕ್ಷ್ಯಗಳನ್ನು ತಯಾರಿಸಿಟ್ಟಳೇ, ಅದೆಷ್ಟೊಂದು ಸಡಗರ! ಮನೆಯಲ್ಲ ಹಸಿಹಿಟ್ಟಿನ ರಂಗೋಲಿ, ಮಾವಿನ ತೋರಣಮಯವಾಯಿತು. ಆದರೆ ಅಳಿಯನೆಲ್ಲಿ ಬಂದನೇ! ಆ ಹಾಳು ಟೆಲಿಗ್ರಾಮಲ್ಲವೇ ಬಂತು, ಶನಿ, ಪೀಡೆ, ಅಳಿಯ ಹೋದ ವರ್ಷದೊಳಗಾಗಿಯೇ ಅವಳೂ ಯಮನ ಪಾಲಾದಳಲ್ಲೇ! ಹಸುಗೂಸು ಪದ್ಮನಿಗೆ ಹೀಗೆ ಎರಡು ಕಡೆಯಲ್ಲೂ ದಿಕ್ಕಿಲ್ಲದೆ ಹೋಗಬೇಕೇ....

"ಅದೇಕೆ ಅತ್ತೆ ಹಾಗೆ ಹೇಳುವಿರಿ? ಮುತ್ತಿನಂತಹ ತಂದೆಯಿರುವರು, ನೀವಿರುವಿರಿ............"

"ನನ್ನನ್ನು ಕಟ್ಟಿಕೊಂಡು ಏನು ಫಲ"? ಈ ಮುದಿಗೂಬೆಯೊಂದು ಲೆಕ್ಕವೆ? ಅವನಿಗೇನಂತೇ ನಾಳೆಯೇ ಹೊಸ ಹೆಂಡತಿಯೊಬ್ಬಳು ಬಂದು ಬಿಟ್ಟರೆ, ಈ ಸಂಕಟವೆಲ್ಲವನ್ನೂ ಮರೆತು ಬಿಡುತ್ತಾನೆ. ನನ್ನ ಪದ್ಮಳನ್ನು ಕೇಳುವವರಾರೇ? ಬಲು ಮುದ್ದಾದ ಮಗು, ಅವಳ ತಾಯಿ ಅದೆಷ್ಟು ಮುದ್ದಾಗಿ ಸಾಕಿದಳೇ.

"ಅತ್ತೆ ನಾ ಹೇಳುವದನ್ನು ಕೇಳಿ ನನ್ನ ಮಂಜುಳೆಯನ್ನು ನಿಮ್ಮ ಮಗನಿಗೆ ಮಾಡಿಕೊಂಡುಬಿಡಿ ಆಗ ಪದ್ಮನಿಗೆ ಯಾವ ಕೊರತೆಯೂ ಬರ

ಲಾರದು. ಇನ್ನೊಬ್ಬರ ಮನೆ ಹುಡುಗಿ ಬಂದರೇನೇ, ನಿನಗೂ ಕಷ್ಟ, ಪದ್ಮನಿಗೂ ಕಷ್ಟ. ಪದ್ಮಳೂ ಸಣ್ಣ ಹುಡುಗಿ ಅವು ಹೋಗಲು ದಿಕ್ಕೆಲ್ಲಿಯದು? ನನ್ನ ಮಂಜುಳೆಗೆ ಸಹಾಯಕಳಾಗಿದ್ದು ಕೊಂಡಿರುತ್ತಾಳೆ.

"ಅಯ್ಯೋ ಇದೇನೆ ಅನ್ಯಾಯ ನೀನು! ದುಃಖ ವಿಚಾರಿಸಲು ಬಂದೆಯಾ, ಅಥವಾ ಹೆಣ್ಣು ಕೊಡಲು ಬಂದೆಯೋ? ಬಲು ಚೆನ್ನವೇ ನಿನ್ನ ಮಾತು! ಮನೆಯ ನಂದಾದೀಪದಂತಹ ಮಗು ಮಾಂಗಲ್ಯ ಕಳೆದು ಕೊಂಡು ಕುಳಿತಿದೆ! ಅವಳಪ್ಪನಿಗೀಗ ಮದುವೆಯಂತೆ! ಮದುವೆ! ಬಲುಚೆನ್ನ........"

ಏನಮ್ಮಾ, ಕೂಗಾಡುತ್ತಿ, ಇದು ಸಹಜವಲ್ಲವೇ! ನರಸಮ್ಮಾ! ನಿನ್ನ ಹುಡುಗಿಯನ್ನು ಮದುವೆಯಾಗಲು ನನಗಾವ ಅಭ್ಯಂತರವೂ ಇಲ್ಲ. ಮುಂದಿನ ತಿಂಗಳು ಹತ್ತನೇಯ ತಾರೀಖಿಗೇ ಮುಹೂರ್ತವಿಟ್ಟುಕೊ. ಈ ವಿಷಯವನ್ನು ನಿನ್ನ ಗಂಡನಿಗೂ ತಿಳಿಸಿಬಿಡು.... .. ...ಎನ್ನುತ್ತಾ ಪದ್ಮಳ ತಂದೆ ವೆಂಕೋಬರಾಯರು ಬಂದು ತಾಯಿ ಹತ್ತಿರ ಕುಳಿತರು.

"ಏನೋ, ವೆಂಕೋಬ! ಇದೆಂತಹ ಅನ್ಯಾಯವೋ! ಮನೆಗೆ ಒಂದೇ ಒಂದು ಮಗು, ಮುತ್ತಿನಂತಹ ಮಗು. ಗಂಡನನ್ನು ಕಳೆದು ಕೊಂಡು ವರ್ಷವಾಗಲಿಲ್ಲ, ಪ್ರಾಣ ಪದಕದಂತಹ ಹೆಂಡತಿ ಸತ್ತು ಹತ್ತು ದಿನ ಕಳೆಯಲಿಲ್ಲ. ಅಷ್ಟರೊಳಗಾಗಿ ಹೆಣ್ಣು ನೋಡಿ ಗೊತ್ತು ಮಾಡಿಕೊಂಡು ಬಂದುಬಿಟ್ಟೆಯೇನೋ! ಎಲ್ಲ ನನ್ನ ಹಣೆಯ ಬರಹ. ನಾ ಮಾಡಿದ ಪಾಪದ ಹೊರೆ. ನಿನ್ನನ್ನು ಹೇಳಿ ಏನು ಫಲ..........."

"ಹೋದವರು ಹೋದದ್ದಾಯಿತು. ಅದಕ್ಕಾಗಿ ನನ್ನ ಸುಖವನ್ನೇಕೆ ಕಳೆದುಕೊಳ್ಳಬೇಕು? ಅಮ್ಮಾ ನೀನು ಹೇಳುವುದು ಮಾತ್ರ ನ್ಯಾಯವೇ?"

"ಅನ್ಯಾಯ ಮಗೂ ಪದ್ಮಳಿಗೆ ಇಲ್ಲವೇನೋ?"

ಉತ್ತರ ಹೇಳಲು ತೋಚದೆ ಮೌನವನ್ನವಲಂಬಿಸಿದರು ವೆಂಕೋಬರಾಯರು!

---

# ರಾಜಣ್ಣನ ಡೈರಿ

೨-೧-೪೩.

ಅಪ್ಪನಿಂದ ಈದಿನ ಕಾಗದ ಬಂತು. ಈಗೀಗ ದಿನವಹಿ ಅವರಿಂದ ಕಾಗದ ಬಾರದೆ ಇರುವುದಿಲ್ಲ. ಅಪ್ಪನೂ ಕೂಡ ಹಳ್ಳಿಗಾಡಿನ ಹುಡುಗಿಯೊಂದನ್ನು ತಂದು ನನ್ನ ಕುತ್ತಿಗೆಗೆ ಕಟ್ಟಿದ ಹೊರತು ನೆಮ್ಮದಿಯಿಂದ ಇರಲಾರರೆಂದು ತೋರುತ್ತದೆ. ಯಾರಿಗೆ ಬೇಕಾಗಿದೆ, ಈ ಹಳ್ಳಿಗಾಡಿನ ಪ್ರಾರಬ್ಧವೆಲ್ಲ! ಒಂದು ಸಾವಿರ ರೂಪಾಯಿಗಳ ವರದಕ್ಷಿಣೆ ಸಹ ಕೊಡಲಾರದ ಬಡವರಂತೆ ಅವರುಗಳು. ಅಪ್ಪನು, ಅಷ್ಟೂ ವರದಕ್ಷಿಣೆ ಸಹ ತೆಗೆಯುವುದಿಲ್ಲವಂತೆ, ಮಹಾ ದೊಡ್ಡ ಲಕ್ಷಾಧಿಪತಿ! ಬರೀ ಒಣಜಂಬವಷ್ಟೇ!

ಕೊನೆಗೆ ವರದಕ್ಷಿಣೆಯಾದರೂ ತೆಗೆದು, ವಿಲಾಯಿತಿಗೆ ಹೋಗಿ ಬರೋಣವೆಂದಿದ್ದ ನನ್ನ ಆಶೆಯೂ ಮಣ್ಣುಪಾಲಾದಂತೆಯೇ, ಹೌದು. ಈ ಸಂಬಂಧ ಬೆಳೆಸುವುದರಲ್ಲಿ ನನಗೆ ಸ್ವಲ್ಪವೂ ಇಷ್ಟವಿಲ್ಲವೆಂದು ಬರೆದು ಬಿಡುತ್ತೇನೆ.

೫-೧-೪೩.

ಸರಿ, ಈ ದಿನ ಲಲಿತೆ ಕಾಗದ ಹಾಕಿಬಿಟ್ಟಿದ್ದಾಳೆ, ದೊಡ್ಡ ಹೆಂಗಸಿನಂತೆ......... ...ನನಗೆ ಬುದ್ಧಿವಾದ ಬರೆದಿದ್ದಾಳೆ, ಮಹಾ ಪ್ರವೀಣೆ! ಹೆಣ್ಣಿನ ಕಡೆಯವರು ಅಷ್ಟೇನೂ ಹಣವಂತರಲ್ಲವಂತೆ. ಆದರೆ, ತಂದೆ ಅವರು ಕೊಡಬಹುದಾದ ವರದಕ್ಷಿಣೆಯಷ್ಟನ್ನೂ ಕೂಡ ಮುಟ್ಟಲು ತಯಾರಿಲ್ಲವಂತೆ! 'ಹುಡುಗಿ ಬಲು ಚೆಲುವೆ. ವಿದ್ಯಾವಂತೆ, ಬುಗುರಿಯಂತೆ ಕೆಲಸ ಮಾಡುತ್ತಿರುತ್ತಾಳೆ. ರಾಜಣ್ಣಾ, ನೀನವಳನ್ನು ಮದುವೆಯಾದರೆ ಬಹಳ ಅದೃಷ್ಟಶಾಲಿಯೇನೋ ಹೌದು!............ಎಂದು ಏನೇನೋ ಬರೆದಿರುವಳು ಅಡುಗೂಲಜ್ಜಿಯಂತೆ! ಇವಳನ್ನಾರು ಯೋಚನೆ ಕೇಳಿದರೋ, ಕಾಣೆ.

೧೨-೧-೪೩.

ನಾನು ಅವೆಷ್ಟೊಂದು ಬಗೆಗಳಲ್ಲಿ ಬರೆದರೂ ಕೂಡ, ಯಾಕೆ ಹೀಗೆ ನನ್ನನ್ನು ಸುಮ್ಮನೆ ಪೀಡಿಸುತ್ತಾರೋ, ಕಾಣೆ.” ಈ ಮದುವೆ ಖಂಡಿತ ನಾನು ಒಪ್ಪಲಾರೆನೆಂದು, ಈ ದಿನ ಒಂದು ಟೆಲಿಗ್ರಾಮನ್ನೇ ಕೊಟ್ಟುಬಿಟ್ಟೆ.

೪-೨-೪೩.

“ಅಯ್ಯೋ ರಾಮಾ ! ಅಪ್ಪನೂ ಹೀಗೆ ಬರೆಯುವರೆಂದು ನಾನು ಕನಸಿನಲ್ಲೂ ಎಣಿಸಿರಲಿಲ್ಲವಲ್ಲಾ. ಇನ್ನು ಮೇಲೆ ನನಗೂ ಅವರಿಗೂ ಇದ್ದ ಬಾಂಧವ್ಯವು ಹರಿದು ಹೋಯಿತೆಂದು ಬರೆದುಬಿಟ್ಟಿರುವರಲ್ಲಾ !............ ಸರಿ............ಇದಕ್ಕೊಂದು ದಾರಿ ಹುಡುಕಬೇಕು............ನಾನೂ ಕೂಡ ಇಷ್ಟೊಂದು ಅವಸರಪಟ್ಟು ಬರೆದದ್ದೂ ತಪ್ಪೇ, ಹೌದು. ಏನು ಮಾಡಲೀಗ ?........ನಡೆದದ್ದು ನಡೆದು ಹೋಯಿತು. ಇನ್ನು ಚಿಂತಿಸಿ ಫಲವೇನು ? ಪರೀಕ್ಷೆಯಂತೂ ಮುಗಿದುಹೋಯಿತು. ನೆಟ್ಟಗೆ ಹಳ್ಳಿಗೆ ಹೋಗಿ ಅಪ್ಪನೊಡನೆ ಮಾತಾಡಿ ಒಂದು ನಿರ್ಧಾರಕ್ಕೆ ಬರುವುದು ಬಿಟ್ಟು ಹೀಗೆ ಶುದ್ಧ ತಿಳಿಗೇಡಿಯಾಗಿ ನಡೆದುಕೊಂಡು ಬಿಟ್ಟೆನಲ್ಲಾ ! ಇನ್ನು ಚಿಂತಿಸಿ ಏನು ಫಲ? ಸರಿ, ಬೆಂಗಳೂರಿಗೆ ಹೋಗಿ ಏರ್‌ಕ್ರಾಫ್ಟ್ ಫ್ಯಾಕ್ಟರಿಯಲ್ಲಿ ಏನಾದರೊಂದು ಕೆಲಸಗಿಲಸ ಹುಡುಕೋಣ; ನಾಳೆ ಬರುವುದಾಗಿ ಕಿಟ್ಟೀಗೊಂದು ಟೆಲಿಗ್ರಾಂ ಹೊಡೆದರೆ ?............

೫-೨-೪೩.

ನಮ್ಮ ಸಮಾಜವು ಏಕೆ ಹೀಗೆ, ವರದಕ್ಷಿಣೆ ಎಂಬ ಸುಳಿಯಲ್ಲಿ ಸಿಕ್ಕಿಕೊಂಡು ಒದ್ದಾಡುತ್ತದೆಯೋ. ರೈಲಿನಲ್ಲಿ ಆ ಪರಿತಾಪಕರವಾದ ದೃಶ್ಯವನ್ನು ಕಾಣಲು ಸಹಿಸಲಾರದೇ ಹೋದೆ. ಹುಡುಗಿಯು ಗಿಣಿಯಂತೆ ಬಲು ಚೆಲುವಾಗಿದ್ದಾಳೆ. ಸೌಂದರ್ಯ ದೇವತೆ ಅವಳೇ ಏನೋ ಎನ್ನುವಂತಿದ್ದಾಳೆ. ರಾಯರು ಗ್ರಾಮವಾಸಿಯಾದರೂ ಕೂಡ, ಹುಡುಗಿಯನ್ನು ಮೈಸೂರಿನಲ್ಲಿ ತಂಗಿಯ ಮನೆಯಲ್ಲಿ ಬಿಟ್ಟಿದ್ದು ಇಂಟರ್‌ಮೀಡಿಯೆಟ್ ತರಗತಿಯವರೆಗೂ ಓದಿಸಿರುವರಂತೆ. ಅದು ಯಾರೋ ಗೊತ್ತಿಲ್ಲ........ಅವನೂ ಒಬ್ಬ ಗ್ರಾಜುಯೇಟನಂತೆ, ಮಹಾ ದೊಡ್ಡ ಮನುಷ್ಯ, ನಾಚಿಕೆಗೇಡು, ಅವನ ತಾಯಿ ತಂದೆಯರು ಅದೆಷ್ಟೆಷ್ಟು ಹೇಳಿದರೂ ಕೂಡ ವರದಕ್ಷಿಣೆಗಾಗಿ ಆಸೆಪಟ್ಟು

ಈ ಹುಡುಗಿಯನ್ನು ಮದುವೆಯಾಗುವುದಿಲ್ಲವೆಂದುಬಿಟ್ಟನಂತೆ; ರಾಯರು ವರದಕ್ಷಿಣೆ ಕೊಡಲು ಶಕ್ತಿಯಿಲ್ಲದವರಾಗಿ ಗಿಣಿಯನ್ನು ಬೆಳಸಿ ಬೆಕ್ಕಿನ ಬಾಯಿಗೆ ಕೊಡುವಂತೆ, ಬೆಂಗಳೂರಲ್ಲೊಬ್ಬ ವಯೋಧಿಕ ಉದ್ಯೋಗಸ್ಥರಿಗೆ ಎರಡನೇ ಹೆಂಡತಿಯಾಗಿ ಕೊಡುವುದಕ್ಕಾಗಿ ಹುಡುಗಿಯನ್ನು ತೋರಿಸಿ ಬರಲು ಪ್ರಯಾಣ ಹೊರಟಿರುವರಂತೆ. ಪಾಪ, ಕಷ್ಟವನ್ನು ನೋಡಲಾರದೆ ಹೋದೆ. ಪೂರ್ಣಿಮಾ ಚಂದ್ರನನ್ನು ಮೋಡ ಕವಿದುಕೊಂಡಂತೆ ತೋರಿ ದಳು. ಸರಿ, ಹುಡುಗಿಯನ್ನು ನಾನು ಮದುವೆಯಾಗುತ್ತೇನೆಂದು ಮಾತು ಕೊಟ್ಟುಬಿಟ್ಟೆ. ಆಗ ಅವರಿಬ್ಬರ ಮುಖದಲ್ಲೂ ಉಕ್ಕಿಬಂದ ಆನಂದವನ್ನು ನೋಡಬೇಕಲ್ಲಾ! "ಕಬ್ಬು ಸಿಗಿಯಲು ಕೂಲಿ ಬೇಕೇನು"? ಇಂತಹ ಚೆಲುವೆ ದೊರಕಬೇಕಲ್ಲಾ! ವರದಕ್ಷಿಣೆಯಂತೆ, ವರದಕ್ಷಿಣೆ. ನಾನೊಂದು ಬಿಡಿಗಾಸು ಕೂಡ ತೆಗೆದುಕೊಳ್ಳುವುದಿಲ್ಲ. ಅಪ್ಪನಿಗೂ ಈ ವಿಷಯ ಕುರಿತು ಟೆಲಿಗ್ರಾಂ ಕೊಟ್ಟುಬಿಟ್ಟೆ. ಅವರೇನು ಬರೆಯುವರೋ ನೋಡೋಣ."

೭-೨-೪೩.

ಓಹೋಹೋ! ಈ ಹುಡುಗಿಯನ್ನೇ ಮತ್ತೆ ಅಪ್ಪನೂ ನನಗೆ ನಿಶ್ಚಯ ಮಾಡಿದ್ದುದು. ಭೇಷ್ ಭೇಷ್! ನನಗೆ ಶುಕ್ರದಶೆ ಒದಗಿಬಿಟ್ಟಿದೆ. ಚಿನ್ನ ದಂತಹ ಮಡದಿ, ಚಿನ್ನದಂತಹ ೩೦೦ ರೂ ಸಂಬಳದ ಕೆಲಸ. ಚಿನ್ನದಂತಹ ತಾಯಿ ತಂದೆಯರ ಪ್ರೇಮ ವಾತ್ಸಲ್ಯ ಹೊಂದಿಬಿಟ್ಟೆ. ಅವಳ ಹೆಸರು ಭಾಗ್ಯ ಲಕ್ಷ್ಮಿಯಂತೆ! ಕೈಹಿಡಿದ ಬಳಿಕ ಭಾಗ್ಯಕ್ಕೇನು ಕೊರತೆ?

# ರೇವತಿಯ ವಿವಾಹ

ರಾತ್ರಿ ಒಂಬತ್ತು ಘಂಟೆಯ ಸಮಯ. ಮನೆಯಲ್ಲಿ ಎಲ್ಲರೂ ಊಟವನ್ನು ಮುಗಿಸಿಕೊಂಡು ತಂತಮ್ಮ ಕೆಲಸದಲ್ಲಿ ನಿರತರಾಗಿದ್ದರು. ಮಿಸ್ಟರ್ ಮಾಧವ ರಾಯರು ಪದ್ಧತಿಯಂತೆ ನಡುಮನೆಯ ಆರಾಮಕುರ್ಚಿಯಲ್ಲಿ ಕುಳಿತು ವರ್ತಮಾನ ಪತ್ರವನ್ನು ತಿರುವಿಹಾಕುತ್ತಲಿದ್ದರು. ಲಲಿತಮ್ಮನವರು ಅಡುಗೆ ಮನೆಯ ಚಿಲ್ಲರೆ ಕೆಲಸಗಳನ್ನು ಮುಗಿಸಿಕೊಂಡು ತಾಂಬೂಲದ ತಟ್ಟೆ ಸಹಿತವಾಗಿ ಒಂದು ಚಾಪೆಯಲ್ಲಿ ಮಂಡಿಸಿದರು. ಕಿಟ್ಟಿಯು ಆಫೀಸು ರೂಮಿನ ರೇಡಿಯೋವಿಗೆ ಸ್ವಿಚ್ ಹಾಕಿ ಯುದ್ಧದ ವರ್ತಮಾನವನ್ನು ಕೇಳುವುದರಲ್ಲಿ ತಲ್ಲೀನನಾಗಿದ್ದನು. ಬೇಸಿಗೆಯ ರಜ ಮಕ್ಕಳಿಗಂತೂ ಹಬ್ಬವೋ ಹಬ್ಬ. ರೇವತಿ, ಚಿತ್ರಾ, ಶ್ರೀಧರಾ—ಮೂವರು ನಡುಮನೆಗೆ ಅಂಟಿದಂತೆ ಇದ್ದ ಅಜ್ಜಮ್ಮನವರ ಕೊಠಡಿಯಲ್ಲಿ ಅಜ್ಜಮ್ಮನೊಡನೆ ಪಗಡೇ ಆಡುತ್ತಲಿದ್ದರು. ಮಗು ಗೋಪಾಲ ಆಗಲೇ ಮಲಗಿಬಿಟ್ಟಿದ್ದನು. ಆಗ ಹಠಾತ್ತನೆ ಬೀದಿಯ ಬಾಗಿಲ ಮುಂದೆ ಬೈಸಿಕಲ್ ಗಂಟೆ ಕೇಳಿಸಿತು. ಅದರ ಜೊತೆಗೆ "ಸಾರ್ ಟೆಲಿಗ್ರಾಂ, ಸಾರ್ ಟೆಲಿಗ್ರಾಂ," ಎಂಬ ಧ್ವನಿ ಕೇಳಬಂದಿತು. ಎಲ್ಲರೂ ಹೆದರಿದವರಾಗಿ ಕೆಲಸವನ್ನು ಅಷ್ಟಷ್ಟಕ್ಕೇ ಬಿಟ್ಟು ಓಡಿದರು. ಚಿಕ್ಕಪ್ಪನಾದ ಕಿಟ್ಟಿಯು ಮಕ್ಕಳನ್ನೆಲ್ಲಾ ಹಿಂದೆ ಸರಿಸಿ ಅವರನ್ನ ಟ್ಟಿಸಿಬಿಟ್ಟು ಟೆಲಿಗ್ರಾಮನ್ನು ತೆಗೆದುಕೊಂಡು ರುಜು ಹಾಕುವುದಕ್ಕಾಗಿ ಲೇಖನಿಯನ್ನು ಹುಡುಕತೊಡಗಿದನು. ಅವನ ಅಣ್ಣನಾದ ಮಾಧವರಾಯರು "ಲೋ, ಏನೋ ಅದು? ಮುಂಚೆ ಬಿಚ್ಚಿನೋಡದೆ ಏನನ್ನೋ ಮಾಡುತ್ತಿರುವೆ? ಎಂದು ಅವನ ಕೈಯಿಂದ ಟೆಲಿಗ್ರಾಮನ್ನು ಕೀಳಲು ಹೋದರು. ಸ್ವಲ್ಪ ತಾಳು ಅಣ್ಣಾ, ಲೇಖನಿಯನ್ನು ಅದೆಲ್ಲೋ ಮಡಗಿಬಿಟ್ಟೆ ಎಂದು ಕಿಟ್ಟಿಯು ಟೆಲಿಗ್ರಾಮನ್ನು ಅಣ್ಣನ ಕೈಗೂ ಕೊಡದೆ, ತಾನೂ ಸಹ ಬಿಚ್ಚಿ ಓದದೆ ಎಲ್ಲರನ್ನೂ ಧರ್ಮಸಂಕಟದಲ್ಲಿ ಮುಳುಗಿಸಿ ತನ್ನ ಲೇಖನಿಯನ್ನು ಹುಡುಕುವುದರಲ್ಲಿ ಉದ್ಯುಕ್ತನಾದನು. ಒಳ್ಳೆಯ ಸಮಯಕ್ಕೆ ಟೆಲಿಗ್ರಾಂ ಸೇವಕನು ತನ್ನ ಕೋಟಿನ ಜೇಬಿನಲ್ಲಿದ್ದ ಸೀಸದಕಡ್ಡಿ

ಯೊಂದನ್ನು ತೆಗೆದು ಕೊಡದಿದ್ದಲ್ಲಿ ಎಲ್ಲರಪಾಡೂ ಇನ್ನೂ ಅರ್ಧಗಳಿಗೆ
ಪೇಚಾಟದಲ್ಲಿ ಮುಳುಗುತ್ತಿತ್ತು. ಟೆಲಿಗ್ರಾಮನ್ನು ಓದಿ ಹೇಳುವುದರೊಳ
ಗಾಗಿ ಲಲಿತಮ್ಮನು "ಅಯ್ಯೋ ನನಗೆ ಹೊಟ್ಟೆ ತೊಳೆಸುತ್ತದೆಯಲ್ಲಾ ! ತಿರು
ಪತಿ ವೆಂಕಟರಮಣಾ ! ಹೇ, ನಂಜುಂಡೇಶ್ವರಾ ! ಅಣ್ಣನಿಗೆ ಏನೂ ಇಲ್ಲದೆ
ಇರಬೇಕಲ್ಲಾ. ಮೊನ್ನೆತಾನೇ ಅವನಿಗೆ ಬಹಳ ಜ್ವರವೆಂದು ಅಮ್ಮ
ಬರೆದಿದ್ದಳು. ಟೆಲಿಗ್ರಾಮಿನಲ್ಲಿ ಒಳ್ಳೆಯ ವರ್ತಮಾನವಿದ್ದರೆ ಸಾಕಲ್ಲಾ"
ಎಂದು ಹಂಬಲಿಸಲಾರಂಭಿಸಿದಳು. ಅಜ್ಜಿಯಾದರೋ ಮೆಲ್ಲಗೆ ಎದ್ದು ಬಂದು
ತನ್ನ ದೊಡ್ಡಮಗನನ್ನು ಸಮೀಪಿಸಿ "ಏನೋ, ಮಾಧೂ" ಅದೇನು ವರ್ತಮಾ
ನವೋ ? ನಮ್ಮ ಮಂಜೂ ಗಂಡನಿಂದ ಬಂದಿದೆಯೋ, ಏನೋ ? ಅಯ್ಯೋ
ಮಗುವನ್ನು ಅಷ್ಟೊಂದು ದೂರದೇಶಕ್ಕೆ ಕೊಟ್ಟದ್ದುದೇ ತಪ್ಪು. ಬಹುಶಃ
ಕಲ್ಕತ್ತೆಯಂತೆ ಬೊಂಬಾಯಿಗೂ ಯುದ್ಧಗಿದ್ಧ ಬಂದುಬಿಟ್ಟಿದೆಯೋ ಏನೋ ?
ಹೇ ಭಗವಂತಾ! ನಂಜುಂಡೇಶ್ವರಾ ಮಗುವನ್ನು ಕಾಪಾಡಪ್ಪಾ ಎಂದು ಕಣ್ಣೀ
ರನ್ನು ಸಹ ತಂದುಕೊಂಡುಬಿಟ್ಟಳು.

"ಇಲ್ಲಮ್ಮಾ, ಅದೆಲ್ಲಾ ಇರಲಾರದು. ಸುಮ್ಮಗೆ ಸಿಕ್ಕಾಪಟ್ಟೆ ಮಾತ
ನಾಡಬೇಡವಮ್ಮಾ" ಎಂದು ತಾಯಿಗೆ ಧೈರ್ಯಹೇಳಿ ಕಿಟ್ಟಿಯು ಟೆಲಿಗ್ರಾ
ಮನ್ನು ಬಿಚ್ಚಿ ಓದಿದನು.

"ರಘುನಾಥರಾವ್, ಐ. ಸಿ. ಎಸ್. ಕೊಯಮತ್ತೂರ್, ಹುಡುಗಿ
ಯನ್ನು ನೋಡಲು ನಾಳೆಬೆಳಗ್ಗೆ ಬರುತ್ತಾನೆ ಎಂದಿತ್ತು.

ತಕ್ಷಣ ಎಲ್ಲರ ಮುಖವೂ ಅರಳಿತು. ಹಿಂದಿರುಗುವುದರಲ್ಲಿದ್ದ ಟೆಲಿಗ್ರಾಂ
ಸೇವಕನು ಇದನ್ನು ಕೇಳಿ ಅಲ್ಲೇನಿಂತು ಕೈ ನೀಡಿದನು. ರಾಯರು ಒಳಗೆ
ಓಡಿಹೋಗಿ ಕೋಟ್ ಸ್ಟಾಂಡಿನಲ್ಲಿ ತಗಲುಹಾಕಿದ್ದ ಕೋಟಿನ ಜೇಬಿನಿಂದ
ಎಂಟಾಣೆ ನಾಣ್ಯ ಒಂದನ್ನು ತಂದು ಅವನ ಕೈಯ್ಯಲ್ಲಿಟ್ಟರು. ಚಿತ್ರಾ, ಶ್ರೀಧರ
ಇಬ್ಬರೂ ರೇವತಿಯನ್ನು ಪರಿಹಾಸ್ಯಮಾಡಲು ಪ್ರಾರಂಭಿಸಿದರು.

ರಾಯರು ತಮ್ಮ ತಾಯಿಯನ್ನು ಕುರಿತು "ನೋಡಿದೆಯೋ ಅಮ್ಮಾ,
ಈ ರಾಮೂವನ್ನು ? ತುಟ್‌ಪಿಟ್ ಎನ್ನದೆ ನನ್ನ ಹತ್ತಿರಲೂ ಒಂದು ಮಾತ
ನ್ನದೆ ಇಷ್ಟುಮಾರ ಕೆಲಸ ಮಾಡಿಬಿಟ್ಟಿದ್ದಾನೆ ? " ಎಂದರು.

ಅದೇನನ್ನು ಮಾಡಿಬಿಟ್ಟನೋ ಪಾಪ? 'ಜವನ್' ಎಂದು ಒಂದನೆಯ ದರ್ಜೆಯ ಅಳಿಯನನ್ನು ನಿನಗೆ ಹುಡುಕಿ ಕೊಟ್ಟಿರುವನಲ್ಲಾ, ಅದನ್ನು ನೋಡು! ನಾವೂ ಸಹ ಎರಡುವರ್ಷವಾಗಿ ವರ ಹುಡುಕುತ್ತಲಿರುವೆವು. ಇವನಂತೆ ನಮಗೆ ಸಹಾಯ ಮಾಡಿದವರಾರಿರುವರು ಹೇಳು? ಬೆಳಗಾದರೆ ಅಳಿಯ ಬರುತ್ತಾನೆ. ಲಲಿತೇ! ಟಿಪನ್ ಗಿಪನ್ ಎಲ್ಲಾ ಮಾಡಲು ಮನೆಯಲ್ಲಿ ಎಲ್ಲಾ ಸಾಮಾನುಗಳೂ ಇವೆಯೋ? ಏನು ತಿಂಡಿ ಮಾಡೋಣ? ಮೈಸೂರು ಪಾಕಕ್ಕೆ ಕಡಲೆಯಹಿಟ್ಟು ಇದೆಯೋ? ಬೊಂಬಾಯಿ ಬೋಂಡ ಕರಿಯಲು ಆಲೂಗಡ್ಡೆ, ಈರುಳ್ಳಿ ಇದೇ ತಾನೆ?"

"ಎಲ್ಲಾ ಇದೆ, ಚಿಂತಿಸಬೇಡಿ ಅತ್ತೆಮ್ಮನವರೇ. ನಿನ್ನೆ ಮಾಡಿಟ್ಟ ಚಿಪ್ಸ್, ಕೋಳಬಳೆ ಸಹ ಹಾಗೆಯೇ ಇದೆ" ಎಂದು ಲಲಿತಮ್ಮನು ಅತ್ತೆಯವರ ಚಿಂತಾ ಪರಿಹಾರಮಾಡಿ ಪತಿಯನ್ನು ಕುರಿತು ಏನೂಂದ್ರೇ ನಮ್ಮ ಮಂಜೂನಾ ರಾಮೂಗೆ ಕೊಡಲಿಲ್ಲಾಂತ ಅಷ್ಟೊಂದು ಕೋಪವಾಗಿದ್ದನಲ್ಲಾ. ಅವನೀಗ ನಮಗೆ ಇಷ್ಟೊಂದು ಉಪಕಾರ ಮಾಡಬೇಕಾದರೆ ಅವನದು ಎಷ್ಟು ದೊಡ್ಡಗುಣ!"

ಕಿಟ್ಟಿ "ಅಣ್ಣಾ! ನಿನಗೆ ಬೆಂಗಳೂರಿಗೆ ವರ್ಗಮಾಡಿಬಿಟ್ಟರೆಂದು ಅವನಿಗೆ ಇಷ್ಟು ಬೇಗ ಹೇಗೆ ಗೊತ್ತಾಯಿತು? ನೀನಿಲ್ಲಿಗೆ ಬಂದು ಎಂಟು ದಿನ ತಾನೇ ಆಯಿತು? "ಮಾಧವರಾವ್ ಪ್ರೇಮಭವನ್, ಬಸವನಗುಡಿ" ಎಂದು ಸರಿಯಾಗಿ ವಿಳಾಸ ಬರೆದಿರುವನಲ್ಲಾ!"

ಅಜ್ಜಿ "ಅದು ಗೊತ್ತಾದ ಬಗೆ ಹೇಗೆಂಬುದು ಈಗ ಪತ್ತೆ ಹಚ್ಚದಿದ್ದಲ್ಲಿ ಮುಳಗಿ ಹೋದುದೇನಿದೆ? ಮುಂಚೆ ನಾಳೆ ಅಳಿಯನನ್ನು ಬರಮಾಡಿ ಕೊಳ್ಳಲು ಮಾಡಬೇಕಾದ ಏರ್ಪಾಟುಗಳನ್ನು ಮಾಡಿರೋ, ಮಕ್ಕಳಿರಾ ಯಾಕೆ ಹೀಗೆ ಕಿರಚಿಕೊಳ್ಳುವಿರಿ? ನಮಗೆಲ್ಲಾ ಬೇಕಾದಷ್ಟು ಕೆಲಸವಿದೆ. ಹೋಗಿ ಸುಮ್ಮನೆ ಮಲಗಿ, ಅಪ್ಪ ಆಮೇಲೆ ಕೋಪಿಸಿಕೊಳ್ಳುತ್ತಾನೆ" ಎಂದು ಗರ್ಜಿಸಿದರು. ಮರುಕ್ಷಣವೇ ಶಾಂತಿ ನೆಲಸಿತೆಂದರೆ ಅಜ್ಜಮ್ಮನ ಪ್ರಭಾವ ಇನ್ನು ಹೇಗಿದ್ದೀತು?"

* * * *

ಮರುದಿವಸ ರಘುನಾಥರಾವ್ ಐ.ಸಿ.ಎಸ್., ಬಹಳ ಅಪ್-ಟು-ಡೇಟಾಗಿ ಟಾಕ್ಸಿಯೊಂದರಲ್ಲಿ ಬಂದಿಳಿದರು. ಕಿಟ್ಟಿಯೂ, ಮಾಧವರಾಯರೂ ಕಾಂಪೌಂಡಿನ ಹೆಬ್ಬಾಗಿಲ ಹತ್ತಿರವೇ ಕಾದಿದ್ದು ಅಳಿಯಂದಿರನ್ನು ಬರಮಾಡಿಕೊಂಡರು. ಪ್ರೇಮಭವನ ಕಾಂಪೌಂಡಿನಲ್ಲಿ ದೊಡ್ಡದೊಂದು, ಚಿಕ್ಕದೊಂದು (ಎರಡು) ಮನೆಗಳಿದ್ದುವು. ಅಳಿಯಂದಿರು ತಪ್ಪಾಗಿ ಮತ್ತೊಂದು ಮನೆಯೊಳಗೆ ನುಗ್ಗಿಬಿಟ್ಟರೆ ಏನುಮಾಡುವುದೆಂಬ ಹೆದರಿಕೆಯಿಂದ ಅಣ್ಣತಮ್ಮಂದಿರಿಬ್ಬರೂ ರೈಲುಗಾಡಿಯು ಬರುವ ಹೊತ್ತಿಗೆ ಅರ್ಧಘಂಟೆಗೆ ಮುಂಚಿತವಾಗಿಯೇ ಕಾಂಪೌಂಡಿನ ಹೆಬ್ಬಾಗಿಲಿನ ಹತ್ತಿರ ಬಂದು ಕಾದಿದ್ದರು.

ಅಳಿಯಂದಿರು ಹುಡುಗಿಯನ್ನು ನೋಡಿ ಬೆರಗಾದರೆಂದು ಹೇಳುವುದರಲ್ಲಿ ಅತಿಶಯವೇನೂ ಇಲ್ಲ. ರೇವತಿ ಅಷ್ಟೊಂದು ರೂಪವತಿ, ಮಿಂಚಿನ ಬಳ್ಳಿಯಂತಿದ್ದಳು. ಅಚ್ಚಗೆಂಪು, ತಾವರೆಯ ಪುಷ್ಪದಲ್ಲೆರಡು ಕರಿದುಂಬಿಗಳು ಕುಳಿತಿರುವಂತೆ ಮಿನುಗುವ ಕಣ್ಣುಗಳು. ಕರಿಯ ನಾಗರಹಾವಿನಂತಿತ್ತು ಅವಳ ಜಡೆ. ಅವಳು ಉಟ್ಟಿದ್ದ ಕನಕಾಂಬರ ಬಣ್ಣದ ಪೀತಾಂಬರವೂ ಜಡೆಯಲ್ಲಿ ಮುಡಿದಿದ್ದ ಕನಕಾಂಬರ ಪುಷ್ಪದ ಚೆಂಡೂ ಅವಳ ಚೆಂದಕ್ಕೆ ಮತ್ತಷ್ಟು ಕಳೆಗಟ್ಟಿತ್ತು. ಕಲೆಕ್ಟರ್ ರಘುನಾಥರಾಯರು ಅವರು ಮನೆಯ ಹೊಸಲುದಾಟಿ ಬರುವುದರೊಳಗಾಗಿಯೇ ತಮ್ಮ ಪರಿಪೂರ್ಣ ಸಮ್ಮತಿಯನ್ನು ತಿಳಿಸಿಬಿಟ್ಟರು.

ಸರಿ, ಅಂದಿಗೆ ಎಂಟನೆಯ ದಿನವೇ ವಿವಾಹ ಮುಹೂರ್ತವೆಂದು ನಿಶ್ಚಯವಾಯಿತು. ಮಾಧವರಾಯರೊಬ್ಬ ಸ್ಕೂಲ್ ಇನ್ಸ್‌ಪೆಕ್ಟರಾದುದರಿಂದಲೂ, ಕಿಟ್ಟಿಯು ಕಾಲೇಜ್ ವಿದ್ಯಾರ್ಥಿಯಾದುದರಿಂದಲೂ ಯಾರಿಗೂ ಮದುವೆಗಾಗಿ ರಜಾತೆಗೆದುಕೊಳ್ಳುವ ಅವಶ್ಯಕತೆ ಬೀಳಲಿಲ್ಲ. ಮದುವೆಯ ಏರ್ಪಾಟುಗಳು ಸಡಗರದಿಂದ ನಡೆದವು. ಅವಸರಕ್ಕೆ ಬೇರೆ ಯಾವ ದೊಡ್ಡ ಬಂಗಲೆಯೂ ಸಿಕ್ಕಲಿಲ್ಲವಾಗಿ ಮನೆಯ ಮುಂಭಾಗದಲ್ಲಿದ್ದ ವಿಶಾಲವಾದ ಮೈದಾನದಲ್ಲೊಂದು ದೊಡ್ಡ ಚಪ್ಪರ ಎಬ್ಬಿಸಿಬಿಡುವುದೆಂದು ತೀರ್ಮಾನವಾಯಿತು. ವರನು ಒಂದು ಬಿಡಿಗಾಸು ಸಹ ವರದಕ್ಷಿಣೆ ಕೇಳಲಿಲ್ಲ. 'ಕೇವಲ ಈ ಸ್ಕೂಲ್ ಇನ್ಸ್‌ಪೆಕ್ಟರ್ ಮಗಳಿಗೆ ಇಷ್ಟೊಂದು ಭಾಗ್ಯವೇ! ಎಂದು ಊರಲ್ಲೆಲ್ಲೆಲ್ಲಿಯೂ ವಿಸ್ಮಯಗೊಂಡಿದರು. ಆ ಕಾಂಪೌಂಡಿನ

ಮತ್ತೊಂದು ಮನೆಯಲ್ಲಿ ಹೆಂಗಸರು, ಗಂಡಸರೇ ಆದಿಯಾಗಿ ಸಕಲರಿಗೂ ಅಸೂಯೆ ಹುಟ್ಟಿತು.

*     *     *     *

ಸೇಲಂ ಶಿವಸ್ವಾಮಿಪುರದಲ್ಲಿ ಡಾಕ್ಟರ್ ರಾಮಚಂದ್ರನ್ ಎಂ.ಬಿ.ಬಿ.ಎಸ್ ತಾವು ಮಾಧವರಾಯರಿಗೆ ಹೊಡೆದ ಟೆಲಿಗ್ರಾಮಿಗೆ ಉತ್ತರವಿನ್ನೂ ಬರಲಿಲ್ಲ ವಲ್ಲಾ ಎಂದು ಚಿಂತಿಸುತ್ತಾ, ತನ್ನ ಬಂಗಲೆಯ ಮುಂಭಾಗದಲ್ಲಿ ನಿಂತು ಅಂಚೆಯವನನ್ನು ನಿರೀಕ್ಷಿಸುತ್ತಲಿದ್ದರು ಆಗ ಅಂಚೆಯವನು ಬಂದು ಅವರ ಕೈಯ್ಯಲ್ಲೆರಡು ಲಕೋಟೆಗಳನ್ನು ಕೊಟ್ಟು ಹೋದನು.

ಒಂದು ಸ್ಕೂಲ್ ಇನ್ಸ್‌ಪೆಕ್ಟರ್ ಮಾಧವರಾಯರಿಂದ ರಾಮುವಿನ ಮಹದುಪಕಾರವನ್ನು ತಾನೂ ತನ್ನ ಕುಟುಂಬದವರೂ ಎಂದೆಂದಿಗೂ ಮರೆಯಲಾರವೆಂದೂ, ಬರುವ ಸೋಮವಾರ ವಿವಾಹ ಮುಹೂರ್ತ [illegible]ವಾಗಿರುವುದಾಗಿಯೂ, ಮದುವೆಗೆ ಬಂದು ಮದುವೆಯನ್ನು ಸಾಂಗವಾಗಿ ನಡೆಸಿಕೊಡಬೇಕೆಂದೂ ನೂರಾವರ್ತಿ ಬೇಡಿಕೊಳ್ಳುವುದಾಗಿಯೂ ಬರೆದಿದ್ದರು.

ಮತ್ತೊಂದು ರಘುನಾಥರಾವ್ ಐ. ಸಿ. ಎಸ್. ನಿಂದ; ಹುಡುಗಿ ಬಹಳ ಚಿನ್ನಾಗಿದ್ದಾಳೆಂದೂ, ರಾಮುವಿಗೆ ಬಹಳ ವಂದನೆಗಳೆಂದೂ ಮದುವೆಗೆ ಖಂಡಿತ ಬರಬೇಕೆಂದೂ ಬರೆದಿದ್ದ. ಕೊನೆಗೆ ರಾಮು ಹೇಳಿದಂತೆ ಹೆಣ್ಣಿನಕಡೆಯವರು ಅಷ್ಟೇನೂ ಶ್ರೀಮಂತರಂತೆ ತೋರುವುದಿಲ್ಲವೆಂದೂ, ಆದರೇನು, ಹಣಕ್ಕಾಗಿ ಮದುವೆಯಾಗುವವರ ಗುಂಪಿಗೆ ತಾನು ಸೇರಿದವನಲ್ಲವೆಂದೂ, ಹುಡುಗಿಯು ಮನಸ್ಸಿಗೆ ಬಹಳ ಒಪ್ಪಿಗೆಯಾದುದರಿಂದ ಮದುವೆಗೆ ಸಮ್ಮತಿಸಿದೆನೆಂದೂ ಬರೆದಿದ್ದನು.

ಅದನ್ನು ಓದಿ ರಾಮಚಂದ್ರ್ರ "ಕಾಲದಂತೆ ಇವನಿಗೆ ಈ ಹಣ, ಈ ಐ. ಸಿ. ಎಸ್. ಗಳೇ ಹೀಗೆ! ಮಾಧವರಾಯರು ಗಳಿಸಿಟ್ಟಿರುವಂತೆ ಮತ್ಯಾರೂ ಗಳಿಸಿಟ್ಟಿರುವರು? ಎಂದು ಗೊಣಗಿದನು.

ವಿವಾಹ ಮುಹೂರ್ತ ದಿನಕ್ಕೆ ಒಂದಿನ ದಿನವೇ ರಾಮು ಬೆಂಗಳೂರನ್ನು ತಲುಪಿದನು. ಮದುವೆಯ ಮನೆಯ ಮುಂದೆ ಚಪ್ಪರವಿಲ್ಲ! ಅದರ ಪಕ್ಕದ ಮನೆಯಲ್ಲಲ್ಲವೇ ಚಪ್ಪರ, ಓಲಗ, ಬಾವುಟ, ಬ್ಯಾಂಡ್, ಜನ,

ಅಲಂಕಾರ ಆಡಂಬರಗಳಿಲ್ಲವೂ ತುಂಬಿ ತುಳುಕುತ್ತಲಿವೆ! ಮನೆಯ ಮುಂಭಾಗದಲ್ಲಿಯೇ ಎಕ್ಸಿಕ್ಯೂಟಿವ್ ಇಂಜಿನೀಯರ್ ಮಾಧವರಾಯರು ನಿಂತಿದ್ದರು.

"ಏನೋ ರಾಮು? ಏನು ವಿಶೇಷ? ಇದೇನೇ ನೀನು ವರನೋಡಿ ಕೊಡುವ ಲಕ್ಷಣ ನೀನು ಹಿಡಿದುಕೊಡುತ್ತೇನೆಂದು ಹೇಳಿದ ಹಕ್ಕಿಯನ್ನು ಪಕ್ಕದ ಮನೆಯವರಲ್ಲವೇ ಹಿಡಿದುಬಿಟ್ಟರು! ಬಹಳ ಗಟ್ಟಿಗಕಣೋ, ನೀನು!" ಎಂದು ಪರಿಹಾಸ್ಯವೂ, ದುಃಖವೂ ಕಲೆತ ಧ್ವನಿಯಲ್ಲಿ ಅಂದರು.

ರಾಮು ಕಕ್ಕಾಬಿಕ್ಕಿಯಾದನು. "ಏನ್ರೀ ರಾಯರೇ? ನೀವು ಹೇಳುವುದೊಂದೂ ಅರ್ಥವಾಗಲಿಲ್ಲವಲ್ಲಾ. ನಾನು ನಿಮಗೆ ಹೊಡೆದ ಟೆಲಿಗ್ರಾಂ ನಿಮಗೆ ತಲಪಲಿಲ್ಲವೇನು?"

"ಯಾವ ಟೆಲಿಗ್ರಾಮೊ? ಯಾವತ್ತು ಹೊಡೆದೆ?"

"ಅದೇ ಮತ್ತೆ ಹೋದ ಶನಿವಾರ ಹೊಡೆದನಲ್ಲಾ ಕೊಯಂಬತ್ತೂರಿನಿಂದ ರಘುನಾಥರಾವ್ ಐ. ಸಿ. ಎಸ್. ನಮ್ಮ ಜಾನಕಿಯನ್ನು ನೋಡಲು ಬರುತ್ತಾನೆಂದು?"

ರಾಯರಿಗೆ ಈಗ ಸಕಲವೂ ವೇದ್ಯವಾಯಿತು "ಅಯ್ಯೋ ರಾಮೂ! ಪಕ್ಕದ ಮನೆಯವರ ಹೆಸರೂ ನನ್ನ ಹೆಸರೇ ಆ– – – – ಟೆಲಿಗ್ರಾಂ ಸೇವಕನು ಟೆಲಿಗ್ರಾಮನ್ನು ಅವರ ಮನೆಗೆ ಕೊಟ್ಟುಬಿಟ್ಟಿದ್ದಾನೆ. ಅದೇ ಮತ್ತೆ ಅವರ ಮನೆಯಲ್ಲಿ ಟೆಲಿಗ್ರಾಂ, ಟೆಲಿಗ್ರಾಂ ಎಂದು ಏನೋ ಗುಜು ಗುಜು ಮಾತಾಡಿಕೊಂಡರೆಂದು ನಮ್ಮ ಬೇಬೀ ಹೇಳಿದನಲ್ಲಾ" ಎಂದಂದುಕೊಂಡು (ಪ್ರಕಾಶವಾಗಿ) "ಏನೋ ರಾಮೂ! ನೀನು ಟೆಲಿಗ್ರಾಂ ಕೊಟ್ಟ ವಿಳಾಸದಲ್ಲಿ ನನ್ನ ಇನಿಷಿಯಲ್ ಬರೆದಿದ್ದೆಯೋ?" ಎಂದು ಕೇಳಿದರು.

ರಾಮು ಇನಿಷಿಯಲ್ ಗಿನಿಷಿಯಲ್ ಎಂದು ವೃಥಾ ಖರ್ಚೇತಕ್ಕೆಂದು "ಮಾಧವರಾವ್, ಪ್ರೇಮಭವನ್, ಬಸವನಗುಡಿ" ಎಂದು ಮಾತ್ರ ವಿಳಾಸ ಬರೆದಿದ್ದ ಅದರಿಂದೇನೀಗ?

ರಾಯರು ಶುದ್ಧ ಮೋಸವಾಗಿ ಹೋಯಿತಲ್ಲೋ ನಮ್ಮ ಗ್ರಹಚಾರ, ಅಷ್ಟೇ, ನಮ್ಮ ಪಕ್ಕದ ಮನೆಯವರ ಹೆಸರೂ ಮಾಧವರಾಯರೇ, ಹೀಗೆಯೆ, ಮತ್ತೆ ಪ್ರತಿನಿತ್ಯವೂ ಪೋಸ್ಟ್‌ಮ್ಯಾನ್ ಕೂಡ ಕಾಗದಗಳನ್ನು ಬದಲಾಯಿಸಿ

ಬದಲಾಯಿಸಿಕೊಟ್ಟು ಹೋಗುತ್ತಾನೆ. ಅದೇ ರೀತಿ ಈ ಟೆಲಿಗ್ರಾಂ ಪ್ಯೂನೂ
ಅವರ ಮನೆಗೆ ಟೆಲಿಗ್ರಾಮನ್ನು ಕೊಟ್ಟುಬಿಟ್ಟಿದ್ದಾನೆ. ಅವರ ಹುಡುಗಿ ಪುಣ್ಯ
ಮಾಡಿದಳಪ್ಪ, ಏನುಮಾಡೋದು ಈಗ ಸದ್ಯ ಈ ಮನೆಯನ್ನು ಬಿಟ್ಟು
ನಾವು ತಕ್ಷಣ ಹೊರಟು ಹೋಗುವುದೊಂದೇ ಉಪಾಯ, ಈ ಕಾಟ ತಪ್ಪಿ
ಸಲು..........ಎಂದು ಬಹಳವಾಗಿ ನೊಂದುಕೊಂಡರು.

ಆಗ ಅವರಿಬ್ಬರೂ ಮಾತನಾಡುತ್ತಿರುವುದನ್ನು ನೋಡಿ ಇನ್ಸ್‌ಪೆಕ್ಟರ್
ಮಾಧವರಾಯರೇ ವಿವಾಹ ಚಪ್ಪರದಿಂದ ಓಡಿಬಂದು ಬಾ ರಾಮೂ, ಬಾ,
ಬಾ, ಮನೆಯಲ್ಲೆಲ್ಲರೂ ಸೌಖ್ಯವೆ? ಇದೇ ತಾನೆ ಬಂದೆಯಾ? ಬಾ, ಬಾ,
ಬಹಳ ಸಂತೋಷ. ಅಳಿಯಂದಿರೂ ನಿನ್ನನ್ನೇ ಇದಿರು ನೋಡುತ್ತಲಿದ್ದಾರೆ
ಪಾಪ! ಮುಂಚೆ ಕಾಫೀ ತಿಂಡಿ ಮುಗಿಸೋಣ ಬಾ, ರಾಯರೇ ನೀವೂ
ಬನ್ನೀಂಪ್ರಿ..........ಎಂದು ರಾಮುವಿನ ಕೈಹಿಡಿದು ಎಳೆಯುತ್ತಾ ಉಪಚರಿ
ಸಿದರು.

ತನಗೆ ತನ್ನ ತಂಗಿ ಮಂಜುವನ್ನು ಕೊಡದೇ ಹೋದ ಆ ಮುಂಗೋಪಿ
ಮಾಧವರಾಯನ ಮಗಳನ್ನೇ ಈಗ ರಘುನಾಥನು ಮದುವೆಯಾಗುತ್ತಾ
ನೆಂಬುದು ರಾಮುವಿಗೆ ಅವರನ್ನು ನೋಡಿದ ಬಳಿಕವೇ ತಿಳಿಯಲು ಅವನು
ಕಕ್ಕಾಬಿಕ್ಕಿಯಾದನೆಂಬುದನ್ನು ಹೇಳಬೇಕಾದ ಅವಶ್ಯಕವಿಲ್ಲವಷ್ಟೇ?

# ಕ್ಷಮೆ

ಸ್ವರ್ಣ ಗೌರಿಯು ಹರಿ & ಕೋ (Hari and Co) ನ ಮಾಲೀಕರೂ, ಸಾರ್ವಜನಿಕರಲ್ಲಿ ಗಣ್ಯ ಪುರುಷರೂ ಆದ ರಾಜಕಾರ್ಯಪ್ರಸಕ್ತ ರಾವ್ ಬಹದೂರ್ ನರಹರಿರಾಯರ ಕುಮಾರಿ. ನರಹರಿರಾಯರಿಗೆ ತಿಂಗಳಿಗೆ ೩೦೦೦ ರೂ. ವರೆಗೂ ವರಮಾನ ಉಂಟೆಂದು ವದಂತಿ. ಮನೆಯಲ್ಲಿ ಅಡಿಗೆಯವರಿಬ್ಬರು, ತೆ [illegible] ಆಳುಕಾಳುಗಳು, ಮಕ್ಕಳಿಗೆ ಹೆರಳು ಹಾಕಲೂ, ಸ್ನಾನ ಮಾಡಿಸಲೂ ಒಬ್ಬ ದಾದಿ, ರಾಯರಿಗೆಂದು ಪ್ರತ್ಯೇಕವಾಗಿ ಒಂದು ರೋಲ್ಸ್ ರೈಯ್ಸ್ ಮೋಟಾರುಗಾಡಿ, ಪತ್ನಿಯ ಮತ್ತು ಮಕ್ಕಳ ಉಪಯೋಗಾರ್ಥವಾಗಿ ಫೋರ್ಡ್ ಸೆಡ್‌ಬಾಡಿ ಗಾಡಿಯೊಂದು, ತೋಟದ ಕೆಲಸಕ್ಕೆ ಇಬ್ಬರು ಮಾಲಿಗಳು, ಇನ್ನೊಂದು ವೈಭವ!

ಬಸವನಗುಡಿ ವಿಸ್ತರಣದಲ್ಲಿ, ಅದೇ ಆ ಕಾನಕಾನಹಳ್ಳಿಯ ರಸ್ತೆಯಲ್ಲಿ ನೆಟ್ಟಗೆ ಹೋದರೆ ಕೊನೆಯ ಕ್ರಾಸ್. ರಸ್ತೆಯ ಮುಂಚಿನ ರಸ್ತೆಯ ಬಲಗಡೆಗೆ ತಿರುಗಿದರೆ ಒಂದಲ್ಲ, ಎರಡನೆಯ ಆ ದೊಡ್ಡ ಬಂಗಲೆಯೇ ಅವರದು. ಗೇಟ್‌ನ ಮುಂದೆ "ಸುಂದರ ಭವನ್" ಎಂದು ಗಿಲ್ಟ್ ಅಕ್ಷರದಲ್ಲಿ ಕೆತ್ತನೆಯ ಕೆಲಸ ಮಾಡಿದ ಬೋರ್ಡ್ ಒಂದು ಹೂತಿದೆ ನೋಡಿ! ಅದೇ ಬಂಗಲೆ, ತಿಳಿಯಿತೇನು ?

ಬಂಗಲೆಯನ್ನು ನೀವು ನೋಡಿಲ್ಲವಾದರೆ ನಾನು ಇಲ್ಲಿ ಸ್ವಲ್ಪ ವರ್ಣಿಸಲೇ? ಅದು ಈಗ ಇರುವುದಕ್ಕಿಂತ ನಮ್ಮ ನರಹರಿರಾಯರ ಕಾಲದಲ್ಲಿ ನೂರ್ಮಡಿ ಹೆಚ್ಚು ವೈಭವದಿಂದ ಬೆಳಗುತ್ತಿತ್ತು. ಆಹಾ! ಆ ಪುಷ್ಪೋದ್ಯಾನದ ಸೊಬಗನ್ನು ಮಾತ್ರವೇ ಆನಂದಿಸಬೇಕೆಂದರೂ ನಮ್ಮ ಈ ಎರಡು ಕಣ್ಣುಗಳೂ ಸಾಲವು! ರಾಗೀಕಾಳಿನಷ್ಟು ಕೂಡ ಕೊರತೆಯಿಲ್ಲದೆ ಆಧುನಿಕ ಸೌಕರ್ಯವನ್ನೂ ಒಂದುಗೂಡಿಸಿ ನಿರ್ಮಿಸಿದ ಅತ್ಯಂತ ಭವ್ಯವಾದ ಭವನವದು.

ಭವನದ ಸುತ್ತಮುತ್ತಲೂ ಎರಡು ಮೂರು ಎಕರೆಯಷ್ಟು ವಿಸ್ತೀರ್ಣವಾಗಿ ಕಾಂಪೌಂಡ್, ಕಟ್ಟಿತ್ತು. ಅದನ್ನು ಪುಷ್ಪೋದ್ಯಾನ ಮಕ್ಕಳ ಆಟಕ್ಕೆ ಮೈದಾನ ತರಕಾರೀ ತೋಟ, ಫಲೋದ್ಯಾನ (Orchard) ಎಂದು ನಾಲ್ಕು ವಿಭಾಗಗಳಾಗಿ ವಿಭಾಗಿಸಲ್ಪಟ್ಟಿದ್ದಿತು. ಕಾಂಪೌಂಡಿನ ಮುಂಭಾಗದ ಹೆಬ್ಬಾಗಿಲನ್ನು (Gate) ಪ್ರವೇಶಿಸುವಾಗಲೇ ಹೆಬ್ಬಾಗಿಲಿನ ಇಕ್ಕಡೆಗಳಲ್ಲಿಯೂ ದ್ವಾರಪಾಲಕರಂತೆ, ಪೌರ್ಣಮೀ ಚಂದ್ರನೋದಿಯಲ್ಲಿ ಬೆಳಗುತ್ತಲಿರುವ ಎರಡು ವಿದ್ಯುದ್ದೀಪಗಳು ನಮಗೆ ಸುಸ್ವಾಗತವನ್ನು ಬಯಸುವುವು. ಹೆಬ್ಬಾಗಿಲಿನಿಂದ ಬಂಗಲೆಯನ್ನು ಹೋಗಿ ಸೇರಲು ಒಂದೆರಡು ಫರ್ಲಾಂಗುಗಳಷ್ಟು ದೂರವಿರಬಹುದು. ಅಷ್ಟೊಂದು ದೂರದವರೆಗೂ ನಿರ್ಮಲವಾದ ಗ್ರೇವಲ್ (Grave) ರಸ್ತೆ; ಅದರ ಇಕ್ಕಡೆಗಳಲ್ಲೂ ಆ ದ್ವಾರಪಾಲಕರನ್ನು ಹಿಂಬಾಲಿಸುವ ಸಿಪಾಯಿಗಳಂತೆ ಗಿಲ್ಟ್ ಬಣ್ಣ ಹೊದೆಯಲ್ಪಟ್ಟ ಪೂರ್ಣ ಚಂದ್ರರುಗಳನ್ನು ಹೋಲುವ ಗೋಳಾಕಾರದ 'ಡೋಂ' ಗಳನ್ನೊಳಗೊಂಡ ರಸ್ತೆಯ ಇಕ್ಕಡೆಗಳಲ್ಲೂ ವಿವಿಧ ಬಣ್ಣದ ಸೀರೆಗಳನ್ನುಟ್ಟು ಅಲಂಕೃತರಾದ ಸುಂದರ ನಾರಿಯರು ನಮಗೆ ಸುಸ್ವಾಗತವನ್ನು ಮಂದಹಾಸದೊಡನೆ ಬಯಸುತ್ತಾ, ಮೆಲ್ಲಗೆ ಬಳುಕಿ ತಮ್ಮ ಸೌಂದರ್ಯವನ್ನು ಸೂಸುವಂತೆ ಮಂದಮಾರುತದಲ್ಲಿ ಅಲುಗಾಡುತ್ತಲಿರುವ ಪೂರ್ಣ ಪುಷ್ಪಿತ ಗಿಡಗಳು, ಬಂಗಲೆಯ ಮುಂಭಾಗದಲ್ಲಿ ದೊಡ್ಡದಾದೊಂದು ಗೋಳಾಕಾರದ ಮನೋಹರವಾದ ನಂದನವನವೂ, ಅದರ ಸುತ್ತಲೂ ಬಳಸಿ ಓಡುವ ಪರಿಶುದ್ಧವಾದ 'ಗ್ರೇವಲ್' ರಸ್ತೆಯೂ, ಅದರ ಮಧ್ಯಭಾಗದಲ್ಲಿ ಶ್ರೀ ವೇಣುಗೋಪಾಲನ ಅಮೃತಶಿಲಾ ಪ್ರತಿಮೆಯೊಂದರ ಮೂಲಕವಾಗಿ ತನ್ನ ಸುತ್ತಲಿನ ಅಮೃತಶಿಲೆಯ ತಟಾಕದಲ್ಲಿ (Pond) ಚೆಲ್ಲಾಡುತ್ತಲಿರುವ ರಮಣೀಯವಾದ ನೀರಿನ ಬುಗ್ಗೆಯೂ ಆ ಸೌಂದರ್ಯ ಮಹಲಿಗೆ ಮತ್ತಷ್ಟು ಸೊಬಗಿನ ಮೆರುಗನ್ನು ತೀಡಿ ವಿರಾಜಿಸುತ್ತಲಿದ್ದುವು.

ಬಂಗಲೆಯ ಒಳಭಾಗವೂ ಸಹ ನಯನ ಮನೋಹರವಾಗಿ ಭವನದಂತೆ ಅಲಂಕರಿಸಲ್ಪಟ್ಟು ಶೋಭಿಸುತ್ತಲಿದ್ದಿತು. ಈ ಭವನದ ಅಧಿಕಾರಿಯಾದ ನಮ್ಮ ನರಹರಿರಾಯರಿಗೆ ಪರಮಾತ್ಮನು ಸಂತಾನಾಭಿವೃದ್ಧಿಯಲ್ಲಿಯೂ ಸಹ ಧಾರಾಳವಾಗಿ ಕಟಾಕ್ಷವನ್ನು ಬೀರಿ ಒಲಿದಿದ್ದನು. ರಾಯರಿಗೆ

ನಾಲ್ವರು ಕುವರಿಯರೂ, ಮೂವರು ಕುಮಾರರೂ ಇದ್ದರು. ಕುವರಿಯರೇ ಹಿರಿಯರು. ಮೂವ್ವರು ಕುವರಿಯರಿಗೆ ವಿವಾಹವಾಗಿ, ಅಳಿಯಂದಿರು, ಶ್ರೀಮಂತರಾದ ಮಾವನವರ ಮನೆಯನ್ನೇ ಆಶ್ರಯಿಸಿಬಿಟ್ಟಿದ್ದರು. ಇಷ್ಟೊಂದು ಸುಖಸಂಪತ್ತಿನಲ್ಲಿಯೂ, ಆನಂದದಲ್ಲಿಯೂ ಬೆಳೆದ ತಮ್ಮ ಮುದ್ದುಗುವರಿಯರು ಅತ್ತೆಯ ಮನೆಗೆಂದು ಹೋಗಿ ಶ್ರಮಪಡಬಾರದೆಂಬ ಧ್ಯೇಯದಿಂದ ರಾಯರು ತಮ್ಮ ಮಕ್ಕಳನ್ನು ಅತ್ತೆ ಮಾವಂದಿರಿಲ್ಲದ ಆದರೆ ಗ್ರಾಜ್ಯುಯೇಟುಗಳಾದ ಒಳ್ಳೆಯ ವರರನ್ನು ಹುಡುಕಿ ಕೊಟ್ಟು ಮದುವೆ ಮಾಡಿ, ಅಳಿಯಂದಿರಿಗೆ ತಮ್ಮ ಕಂಪೆನಿಯಲ್ಲೇ ಉದ್ಯೋಗ ಒದಗಿಸಿಕೊಟ್ಟು, ಅಳಿಯಂದಿರನ್ನು ಸಂಸಾರ ಸಮೇತರಾಗಿ ತಮ್ಮ ಮನೆಯಲ್ಲಿಯೇ ಇರಿಸಿಕೊಂಡಿದ್ದರು.

ನಮ್ಮ ಸ್ವರ್ಣಗೌರಿಗೂ ಇದೇ ಧ್ಯೇಯದಿಂದ ವೇಣುಗೋಪಾಲ್, ಎಂ. ಎ. ಗೆ ಕೊಟ್ಟು, ಇದೀಗತಾನೆ ಎರಡು ವರ್ಷಗಳ ಹಿಂದೆ ರಾಯರು ಅತ್ಯಂತ ವಿಜೃಂಭಣೆಯಿಂದ ವಿವಾಹವನ್ನು ನೆರವೇರಿಸಿದ್ದರು. ಸ್ವರ್ಣಳೇ ರಾಯರ ಕಿರಿಯ ಪುತ್ರಿ. ಅವಳ ಮೇಲೆ ರಾಯರಿಗೆ ಅತ್ಯಂತ ಪ್ರೀತಿವಾತ್ಸಲ್ಯ. ಆದರೆ........ಆದರೆ ಆ ಹಟವಾದಿಯಾದ ಅಳಿಯನು ರಾಯರ ಧ್ಯೇಯಕ್ಕೆ ಜಗ್ಗಲಿಲ್ಲ. ರಾಯರು ಅಳಿಯನನ್ನು ತಮ್ಮ ಮನೆಯಲ್ಲಿಯೇ ಬಂದಿದ್ದುಬಿಡಬೇಕೆಂದರು. ಆದರೆ ಅದಕ್ಕವನು ಸಮ್ಮತಿಸಲಿಲ್ಲ. ಅಳಿಯ ಮಾವಂದಿರಿಬ್ಬರ ಮಧ್ಯೆಯೂ ದೊಡ್ಡ ತಕರಾರು. ವೇಣುಗೋಪಾಲನು ಮದರಾಸಿನ ಓರಿಯಂಟಲ್ ವಿಮಾ ಕಂಪೆನಿಯಲ್ಲಿ, ಸಣ್ಣ ಹುದ್ದೆಯೊಂದರಲ್ಲಿದ್ದನು. ಅವನಿಗೆ ಸಮೀಪದ ಬಂಧು ಮಿತ್ರರಾರೂ ಇರಲಿಲ್ಲ. ತನ್ನ ತಂದೆಯು ಗಳಿಸಿಟ್ಟಿದ್ದ ಅಲ್ಪ ಸ್ವಲ್ಪ ಹಣದಲ್ಲಿ ವ್ಯಾಸಂಗಮಾಡಿ, ಅದೃಷ್ಟವಶಾತ್ ದೊರಕಿದ್ದ ಆ ಸಣ್ಣ ಹುದ್ದೆಯಲ್ಲಿ ಸೇರಿಕೊಂಡು ಸಂತುಷ್ಟನಾಗಿದ್ದನು. ಅವನಿಗೆ ಮಾವನವರು ಹೇಳುವಂತೆ ಅವರ ಕೈಕೆಳಗಿನ ಉದ್ಯೋಗದಲ್ಲಿದ್ದುಕೊಂಡು, ಕೆಲಸಮಾಡುವುದರಲ್ಲಿ ಸ್ವಲ್ಪವೂ ಅಭಿಲಾಷೆಯಿಲ್ಲ. ಅವನು ಸ್ವಾತಂತ್ರ್ಯಪ್ರಿಯ, ಸ್ವಾಭಿಮಾನಿ! ತನ್ನ ಮನೆ ಗುಬ್ಬಚ್ಚಿಯ ಗೂಡಿನಷ್ಟಿದ್ದರೂ ತನ್ನದೇ ಮನೆಯೊಂದು ಒಂದರಲ್ಲಿದ್ದುಕೊಂಡು, ತನ್ನ ಪತ್ನಿಯೊಡನೆ ಸಂಸಾರ ಮಾಡಿಕೊಂಡಿರಬೇಕೆಂಬ ಇಚ್ಛೆ ಅವನಿಗೆ! ಆದರೆ ರಾಯರು ತಮ್ಮ ಮುದ್ದುಗುವರಿ

ಯನ್ನು ಕಳುಹಿಸಲು ಒಪ್ಪಲಿಲ್ಲ, ಇವರಿಬ್ಬರ ಮನಸ್ತಾಪದ ಮಧ್ಯೆ ಸ್ವರ್ಣ ಗೌರಿಯು ಸಿಲುಕಿಕೊಂಡು ಪೇಚಾಡಿದಳು. ಇತ್ತ ಹೆತ್ತು ಸಾಕಿ ಸಲಹಿ ತನ್ನನ್ನು ದೊಡ್ಡವಳಾಗಿ ಮಾಡಿದ ತಂದೆ, ಅತ್ತ ತನ್ನ ಜೀವಮಾನದ ಸಕಲ ಸುಖ ಸಂತೋಷಗಳಿಗೂ ತನ್ನ ಆಶ್ರಯದಾತನಾದ ಪ್ರಾಣೇಶ್ವರ ತಂದೆಯವರಂತೂ ಬಹು ಮುಂಗೋಪಿ, ಅವರಿಗೆ ಎದುರಾಗಿ ನಿಂತು ಒಂದು ಮಾತನ್ನೂ ಆಡಲಾಗದು ಅವರ ಮಾತಿಗೆ ಮೀರಿಕೊಂಡು ಪತಿಯ ಗೃಹಕ್ಕೆ ಪ್ರವೇಶಿಸಿದಲ್ಲಿ ಪತಿಯು ತನ್ನ ತಂದೆಯ ಮೇಲಿರುವ ಕೋಪಾವೇಶದಿಂದ ತನ್ನನ್ನು ಸ್ವೀಕರಿಸದೆ ಹೋಗಿಬಿಟ್ಟಲ್ಲಿ ಏನುಗತಿ, ಎಂದು ಕಳವಳಗೊಂಡು ಕಣ್ಣೀರು ಸುರಿಸಿದಳು. ಈ ರೀತಿಯಾಗಿ ಎರಡು ವರ್ಷ ಕಳೆಯಿತು.

* * * *

ಅಂದು ಗೌರಿಯ ಹಬ್ಬ. ಸುಂದರ ಭವನವು ಮಾವಿನ ತೋರಣಗಳಿಂದಲೂ, ಹಸಿಯ ಹಿಟ್ಟಿನ ರಂಗೋಲೆಯಿಂದಲೂ ಸುಶೋಭಿತವಾಗಿದ್ದಿತು. ಆ ಭವನದ ವಿಶಾಲವಾದ ಪೂಜಾಗೃಹದಲ್ಲಿ ಅಲಂಕಾರಮಯವಾದ ಕರೀ ಮರದ ಮಂದಾಸನದಲ್ಲಿ ಗೌರಮ್ಮನು ಮಂಡಿಸಿದ್ದಳು. ಮಂದಾಸನದ ಮುಂಭಾಗದ ಇಕ್ಕಡೆಗಳಲ್ಲಿಯೂ ಬೆಳ್ಳಿಯ ದೀಪಸ್ತಂಭಗಳೆರಡು ತಮ್ಮಲ್ಲಿ ತುಪ್ಪದಿಂದ ಹೊತ್ತಿಸಲ್ಪಟ್ಟ ದೀಪದ ಕಾಂತಿಗಿಂತಲೂ ಹೆಚ್ಚಾಗಿ ಹೆಮ್ಮೆಯಿಂದ ಥಳ ಥಳ ಎಂದು ಶೋಭಿಸುತ್ತಲಿದ್ದುವು. ಇವಲ್ಲದೆ ತುಪ್ಪದಿಂದ ಹೊತ್ತಿಸಲ್ಪಟ್ಟ ಅನೇಕ ಪುಟ್ಟ ಪುಟ್ಟ ನೀಲಾಂಜನಗಳೂ ಮಂದಾಸನದ ಸುತ್ತಲೂ ನಕ್ಷತ್ರಗಳ ತೋರಣದಂತೆ ಅಲಂಕೃತವಾದ ವಿದ್ಯುಚ್ಛಕ್ತಿಯ ದೀಪಗಳೂ ಪ್ರಕಾಶಿಸುತ್ತಲಿದ್ದುವು. ಕಮಲ, ಸಂಪಿಗೆ, ಜಾಜಿ, ಸೇವಂತಿಕೆ, ಗುಲಾಬಿ, ದವನ, ಮರುಗಗಳೇ ಮುಂತಾದ ಸುವಾಸನಾ ಪುಷ್ಪಗಳು ಇನ್ನೇನು ಸ್ವಲ್ಪ ಹೊತ್ತಿನಲ್ಲೇ ದೇವಿಯ ಮೈಮೇಲೆ ಅಲಂಕರಿಸಲ್ಪಟ್ಟು ನಲಿಯುವೆವು ಎಂದು ಸಂತೋಷದಿಂದಲೂ, ಗರ್ವದಿಂದಲೂ ಒಡಗೂಡಿ ಮಂದಹಾಸದೊಡನೆಯೂ ಗಾಂಭೀರ್ಯವಾಗಿಯೂ ದೊಡ್ಡ ದೊಡ್ಡ ಬೆಳ್ಳಿಯ ತಟ್ಟೆಗಳಲ್ಲಿ ರಂಜಿಸುತ್ತಲಿದ್ದುವು. ಬಾಳೆ, ಕಿತ್ತಳೆ, ಸೀಬೆ, ಸೇಬು, ದ್ರಾಕ್ಷಿ, ದಾಳಿಂಬೆ, ಚಕೋತ ಮುಂತಾದ ವಿವಿಧ ಫಲಗಳೂ ; ಕಡುಬು, ಕಜ್ಜಾಯ,

ಒಬ್ಬಟ್ಟು, ಅಂಜೋರಿ, ರವೆಉಂಡೆ, ಲಾಡು, ಚಿರೋಟಿ, ಫೇಣಿ ಮುಂತಾದ ವಿವಿಧವಾದ ರುಚಿ ರುಚಿಯಿಂದೊಡಗೂಡಿದ ಭಕ್ಷ್ಯಭೋಜ್ಯಗಳೂ ದೇವಿಯ ನೈವೇದ್ಯಕ್ಕಾಗಿ ಹಲವು ತಟ್ಟೆಗಳಲ್ಲಿ ಅಣಿಯಾಗಿ ಇಡಲ್ಪಟ್ಟಿದ್ದುವು. ಯಜಮಾನಿಯಾದ ಸುಂದರಮ್ಮನೂ ಆಕೆಯ ನಾಲ್ಕುಮಂದಿ ಹೆಣ್ಣುಮಕ್ಕಳೂ, ಆಪದ್ಬಾಂಧವಳೂ, ಅನಾಥರಕ್ಷಕಳೂ, ಸರ್ವವ್ಯಾಪಿಯೂ, ಸರ್ವ ಮಂಗಲೆಯೂ, ಕಲ್ಯಾಣಿಯೂ ಆದ ಶ್ರೀ ಗೌರೀದೇವಿಯನ್ನು ಮಂಗಳದ್ರವ್ಯಾದಿ ಫಲ ಪುಷ್ಪ ಭಕ್ಷ್ಯಭೋಜ್ಯಗಳಿಂದ ಉಪಚರಿಸಿ ; ತಮ್ಮ ನಿತ್ಯ ಸೌಮಂಗಲ್ಯಾರ್ಥವಾಗಿಯೂ ಪುತ್ರ ಪೌತ್ರ ಕಳತ್ರಾದಿ ಸಂಪದಭಿವೃದ್ಧ್ಯರ್ಥವಾಗಿಯೂ, ನಿತ್ಯಾನಂದದ ಪರವಾಗಿಯೂ ಪ್ರಾರ್ಥಿಸಿ ದೇವಿಯನ್ನು ಒಲಿಸಿಕೊಳ್ಳುವ ಹಬ್ಬವಲ್ಲವೇ ಅದು ! ಆ ವಿಶಾಲವಾದ ಕೊಠಡಿಯ ಒಂದು ಮೂಲೆಯಿಂದ ಹಿಡಿದು ಮತ್ತೊಂದು ಮೂಲೆಯವರೆಗೆ ಮೊರಬಾಗಿನಗಳು ರೈಲು ಇಂಜನಿಗೆ ಜೋಡಿಸಿದ ಡಬ್ಬಿ (Compartments) ಗಳಂತೆ ಸಾಲಾಗಿ ಇರಿಸಲ್ಪಟ್ಟಿದ್ದುವು. ಆ ಮೊರಬಾಗಿನದ ಪ್ರತಿಯೊಂದರಲ್ಲೂ ಸುಮಾರು ೨೫ ರೂಪಾಯಿಗಳು ಬೆಲೆ ಬಾಳುವ ಹೊಸ ಅರಳೀಪೇಟೆಯ ಸೀರೆಯೊಂದು, ಕಲಾಬತ್ತಿನ ರವಕೆಯೊಂದು, ಬೆಳ್ಳಿಯ ಕುಂಕುಮದ ಭರಣಿ, ದಂತದ ಬಾಚಣಿಗೆ, ಒಂದು ಸೇರು ಅಕ್ಕಿ, ಅಚ್ಚುಬೆಲ್ಲ ಬೇಳೆ ಮುಂತಾದುವುಗಳು ಅವುಗಳಿಗೆ ತಕ್ಕಂತಹ ಉಪ್ಪು, ಬೆಲ್ಲ ಮುಂತಾದ ಅಡಿಗೆಯ ಸಾಮಾನುಗಳು, ತೆಂಗಿನಕಾಯಿ, ತಾಂಬೂಲ, ವಿವಿಧ ಫಲಪುಷ್ಪಾದಿಗಳು, ಕರೀಮಣಿ, ಬಿಚ್ಚೋಲೆಗಳೂ ಇಡಲ್ಪಟ್ಟು, ಮೇಲೊಂದು ಹೊಸ ಮೊರ ಮುಚ್ಚಿ ; ಬಾಗಿನಕ್ಕೆ ಅರಸಿನ ಕುಂಕುಮವನ್ನು ಹಚ್ಚಿ, ಪುಷ್ಪ ಮಂತ್ರಾಕ್ಷತೆಗಳಿಂದ ಪೂಜಿಸಲ್ಪಟ್ಟಿದೆ ಆ ಮೊರಬಾಗಿನಗಳ ಸಾಲನ್ನು ಕಂಡು ಮನೆಯ ಚಿಕ್ಕಪುಟ್ಟ ಮಕ್ಕಳು "ಅಗೋ; ರೈಲುಗಾಡಿ ರೈಲುಗಾಡಿ! ಎಷ್ಟು ಉದ್ದಕ್ಕಿದೆ !" ಎಂದು ಚಪ್ಪಾಳೆ ತಟ್ಟುತ್ತಾ ಕಿಲಕಿಲನೆ ಸೂರ್ಯೋದಯ ಕಾಲದ ಪಕ್ಷಿಗಳ ನಾದದಂತೆ ಶಬ್ದಮಾಡುತ್ತಾ ನಲಿದಾಡುತ್ತಲಿದ್ದರು. ಮಂಟಪದ ಮುಂಭಾಗದಲ್ಲಿ ಸ್ವಲ್ಪ ದೂರದಲ್ಲಿ ಹಾಸಲ್ಪಟ್ಟಿದ್ದ ರತ್ನಕಂಬಳಿಯ ಮೇಲೆ ಮುತ್ತೈದೆಯರು ಕುಳಿತಿರಲು, ಮನೆಯ ಪುರೋಹಿತರು ಕಾತುರರಾಗಿ ಆ ಮನೆಯ ಯಜಮಾನಿಯಮ್ಮನವರ ಮತ್ತು

ಕುವರಿಯರ ಆಗಮನವನ್ನು ನಿರೀಕ್ಷಿಸುತ್ತ ಮಂಟಪದ ಮುಂಭಾಗದಲ್ಲಿ ಕುಳಿತು ಗಂಧ ತೇಯುತ್ತಲಿದ್ದರು.

ಸುಂದರಮ್ಮನೂ ಆಕೆಯ ಪುತ್ರಿಯರೂ ಮಂಗಳ ಸ್ನಾನವನ್ನು ಮಾಡಿ ಪೀತಾಂಬರಗಳನ್ನುಟ್ಟು ದಿವ್ಯಾಲಂಕಾರಭೂಷಿತರಾಗಿ ಪೂಜಾಗೃಹವನ್ನು ಪ್ರವೇಶಿಸಿ ತಮ ತಮಗೆ ಏರ್ಪಡಿಸಲ್ಪಟ್ಟ ಪೀಠಗಳಲ್ಲಿ ಕುಳಿತು ಪೂಜೆಯನ್ನು ಪ್ರಾರಂಭಿಸಿದರು. ಪುರೋಹಿತರು ಟಣ ಟಣವೆಂದು ಘಂಟೆಯನ್ನು ಬಾರಿಸುತ್ತಾ 'ಗಣೇರ್' ಎಂದು ಮಂತ್ರವನ್ನು ಉಚ್ಚರಿಸತೊಡಗಿದರು. ಆಕ್ಷಣ ಮಕ್ಕಳ ಕಿಲಕಿಲ ನಾದವು ಅಡಗಿತು. ಮುತ್ತೈದೆಯರ 'ಗಲಿಬಿಲಿ' ಸಂಭಾಷಣಾ ಶಬ್ದವೂ ನಿಂತಿತು. ಆಟವಾಡುತ್ತಲಿದ್ದ ಮಕ್ಕಳು ಪೂಜಾರಂಭವನ್ನು ಕಂಡು ಕೈ ಕಟ್ಟಿಕೊಂಡು ಭಯ ಭಕ್ತಿಯೊಡನೆ ರತ್ನ ಕಂಬಳಿಯಲ್ಲಿ ಬಂದು ಕುಳಿತು ಪೂಜೆಯನ್ನು ಗಮನಿಸತೊಡಗಿದರು.

ಪೂಜೆಯು ಮುಗಿಯಿತು. ಮಾತೆಯೂ, ಸೋದರಿಯರೂ ಮುತ್ತೈದೆಯರನ್ನು ಮಂಗಳದ್ರವ್ಯಗಳಿಂದ ಉಪಚರಿಸಿ ಮೊರಬಾಗಿನವನ್ನಿತ್ತು ನಮಸ್ಕರಿಸಿ, ಅವರ ಮಂಗಳಾಶೀರ್ವಾದವನ್ನು ಪಡೆದರು. ಅನಂತರದಲ್ಲಿ ಸ್ವರ್ಣಗೌರಿಯೊಬ್ಬಳು ಹೊರತು ಸುಂದರಮ್ಮನೂ ಅವಳ ಪುತ್ರಿಯರೂ ತಮ್ಮ ತಮ್ಮ ಪ್ರಾಣನಾಥರಿಗೆ ನಮಸ್ಕರಿಸಿ ಆಶೀರ್ವಾದವನ್ನು ಪಡೆದರು ಅಲ್ಲಿಯೇ ನಿಂತಿದ್ದ ಸ್ವರ್ಣಗೌರಿಯ ಹೃದಯವನ್ನು ಹಠಾತ್ತನೆ ವೇದನೆಯೊಂದು ಮೂಡಿತು ಅವಳ ಕಣ್ಣುಗಳಿಂದ ಧಾರಾಕಾರವಾಗಿ ಅಶ್ರುಜಲವು ಪ್ರವಹಿಸಲಾರಂಭಿಸಿತು. ಗೌರಮ್ಮನಿಗೆ ಆರತಿ ಬೆಳಗುವುದಕ್ಕಾಗಿ ಅವಳನ್ನು ಕರೆಯಲು ಬಂದ ಅವಳ ತಾಯಿಯು ಮಗಳ ಈ ಅವಸ್ಥೆಯನ್ನು ಕಂಡು ಬೆಚ್ಚಿಬಿದ್ದಳು.

"ಇದೇಕೇ ಸ್ವರ್ಣಾ, ಹೀಗೆ ಅಳುತ್ತಿರುವೆ? ಚೆನ್ನಾಯಿತು ಹಬ್ಬದ ದಿವಸ..........."

"ಅಮ್ಮಾ........ಅ........ಮ್ಮಾ. ನಾನು ಎಂತಹ ನಿರ್ಭಾಗ್ಯೆ........" ಮೇಲೆ ಮಾತನಾಡಲು ಅವಳಿಂದಾಗಲಿಲ್ಲ. ತನ್ನ ಸೀರೆಯ ಸೆರಗಿನಿಂದ ಕಣ್ಣುಗಳನ್ನು ಒರಸಿಕೊಂಡಳು. ಮರುನಿಮಿಷ ಒದೆದು ನುಚ್ಚು ನೂರಾ

ಗುವ ಮಕ್ಕಳ ಆಟದ ರಬ್ಬರ್ ಬೆಲೂನಿನೋಪಾದಿಯಲ್ಲಿ ಅವಳ ಹೃದಯವು ದುಃಖಾವೇಶದಿಂದ ತುಂಬಿಹೋಗಿ ಪರಿತಪಿಸುತ್ತಲಿದ್ದಳು. ತಕ್ಷಣ ಹಡೆದ ತಾಯಿಯ ಕೋಮಲವಾದ ಮನಸ್ಸಿಗೆ ಮಗಳ ದುಃಖವೇದನೆಯ ಕಾರಣ ವಾವುದೆಂಬುದು ಹೊಳೆಯಿತು.

“ ಛೀ, ಹುಚ್ಚಿ ! ಹಬ್ಬದಲ್ಲೂ ಹುಣ್ಣಿಮೆಯಲ್ಲೂ ಹೀಗೆ ಅಳಬಹುದೇ ? ನಿಮ್ಮ ತಂದೆಯೇ ಹೀಗೆ ಹಠ ಹಿಡಿಯುತ್ತಾರಮ್ಮಾ, ನಾನೇನು ಮಾಡಲಿ ನಾನೆಷ್ಟು ಹೇಳಿದರೂ ಕೇಳುವುದಿಲ್ಲಾ. ಅವರು ಕರೆದುಕೊಂಡು ಹೋಗದಿದ್ದರೆ ಬಿಡಲಿ, ಲಚ್ಚನಾ ಬಂದಿರುವನಲ್ಲಾ. ಅವನನ್ನು ಕರೆದುಕೊಂಡು ಹೋಗಿ ನಿನ್ನ ಗಂಡನ ಮನೆಯಲ್ಲಿ ಬಿಟ್ಟು ಬರಹೇಳುತ್ತೇನೆ. ಆಗ ನಿನ್ನ ಗಂಡನಿಗೆ ಬೇಕಾದಷ್ಟು ನಮಸ್ಕಾರಮಾಡಿ ಉಪಚರಿಸುವೆಯಂತೆ. ನಿನ್ನ ಮನೆ ತುಂಬ ಮಕ್ಕಳಾಗಲಿ. ಆಗ, ನಾನು ಬಂದುನೋಡಿ ಹಿಗ್ಗುವೆನಂತೆ. ಅಳಬಾರದು ಕಂದಾ. ಹೋಗಿ ಮುಖ ತೊಳೆದುಕೊಂಡು ಬೊಟ್ಟಿಟ್ಟುಕೊಂಡು ಬೇಗ ಬಾ, ಗೌರಮ್ಮನಿಗೆ ಆರತಿ ಬೆಳಗೋಣ. ಮುತ್ತೈದೆಯರೆಲ್ಲರೂ ಕಾದಿರುವರು ” ಎಂದು ಮಗಳನ್ನು ಸಂತೈಸಿ ಕಳುಹಿಸಿದಳು. ಆಗ ಸ್ವರ್ಣಗೌರಿಗೆ ಹೃದಯದ ಮೇಲಿದ್ದ ಭಾರವಾದ ಕಲ್ಲೊಂದು ಕೆಳಗೆ ತೆಗೆದಿರಿಸಲ್ಪಟ್ಟಂತೆ ಹೃದಯವು ಹಗುರವಾಯಿತು. ಸ್ವಲ್ಪ ಹೊತ್ತಿಗೆ ಮುಂಚಿತವಾಗಿ ಪೂರ್ಣಿಮಾ ಚಂದ್ರನನ್ನು ಮೂಡಿದ್ದ ಕಾರ್ಮೋಡದಂತಹ ಶೋಕರಸವು ಈಗ ದೂರವಾಗಿ, ಅವಳ ಚಂದ್ರವದನವು ಪರಿಪೂರ್ಣವಾಗಿ ಪರಿಶುದ್ಧವಾಗಿರುವ ಆಕಾಶದಲ್ಲಿ ಪ್ರಕಾಶಿಸುತ್ತಲಿರುವ ಹುಣ್ಣಿಮೆಯ ಚಂದ್ರನಂತೆ ಮೆಲುನಗೆಯಿಂದೊಡಗೂಡಿ, ಪ್ರಫುಲ್ಲಿತವಾಗಿ ಪ್ರಕಾಶಿಸಿತು.

* * *

ಅಂದು ರಾತ್ರಿ ಸುಂದರಮ್ಮ, ನರಹರಿರಾಯರು ಮತ್ತು ಲಕ್ಷ್ಮಣರಾಯ ರು ಮೂವರ ನಡುವೆಯೂ ದೊಡ್ಡ ವಾಗ್ವಾದ ನಡೆಯಿತು. ಮೊಟ್ಟಮೊದಲು ರಾಯರು ಸ್ವರ್ಣಳನ್ನು ಗಂಡನ ಮನೆಗೆ ಕಳುಹಿಸಲು ಒಪ್ಪದೆ ಹೋದರು. ಹೆಣ್ಣುಮಕ್ಕಳು ಕಾಲಾಕಾಲನಲ್ಲಿ ಪತಿಯಿಂದೊಡಗೂಡಿ ಸಂಸಾರ ಮಾಡುವುದೇ ಚೆನ್ನವೆಂದೂ, ಇಲ್ಲದಿದ್ದಲ್ಲಿ ಅವರ ಮನ ನೋಯುವುದಲ್ಲದೆ,

ಊರ ಜನರ ಬಾಯಲ್ಲಿಯೂ ಬಿದ್ದು ದೂರಿಗೀಡಾಗಬೇಕಾಗಿ ಬರುವುದೆಂದೂ ವಿವರಿಸಿ ಸುಂದರಮ್ಮನೂ, ಲಕ್ಷ್ಮಣರಾಯರೂ ಪುಟ್ಟ ಪುಟ್ಟ ಉಪನ್ಯಾಸಗಳನ್ನು ಮಾಡಿ ರಾಯರನ್ನು ಮೆಲ್ಲಗೆ ದಾರಿಗೆ ತಂದರು ಲಕ್ಷ್ಮಣರಾಯರು ಆಗ ಗೌರಿಯ ಹಬ್ಬದ ಉಡುಗರೆಗಳನ್ನು ಸಹೋದರಿಗಾಗಿ ತೆಗೆದುಕೊಂಡು ಸುಂದರಭವನಕ್ಕೆ ಶಿವಮೊಗ್ಗೆಯಿಂದ ಬಂದಿದ್ದರು. ಕೊನೆಗೆ ರಾಯರು "ನಾನಂತೂ ಆ ನೀಚನ ಮನೆಯಲ್ಲಿ ಕಾಲಿಡಲಾರೆ. ನೀವೇನಾದರೂ ಮಾಡಿ ಕೊಳ್ಳಿ" ಎಂದು ಅರ್ಧಮನಸ್ಕರಾಗಿ ಒಪ್ಪಿದರು. ಸರಿ, ಲಕ್ಷ್ಮಣರಾಯರು ಸ್ವರ್ಣಗೌರಿಯನ್ನು ಮರುದಿನ ಮದರಾಸಿಗೆ ಕರೆದುಕೊಂಡು ಹೋಗಿ ಗಂಡನ ಮನೆಯಲ್ಲಿ ಬಿಟ್ಟು ಬಂದು, ನಂತರ ಶಿವಮೊಗ್ಗೆಗೆ ಹಿಂದಿರುಗುವುದೆಂದು ನಿಷ್ಕರ್ಷೆಯಾಯಿತು. ಸುಂದರಮ್ಮನು ಸಡಗರದಿಂದ ಉಡುಗರೆಗಳನ್ನೂ, ಭಕ್ಷ್ಯಗಳನ್ನೂ ಪ್ರಿಯಪುತ್ರಿಗೆ ಕಟ್ಟಿಕೊಟ್ಟಳು.

ಮರುದಿನ ರಾತ್ರಿಯ ರೈಲು ಗಾಡಿಯಲ್ಲಿಯೇ ಸ್ವರ್ಣಳೂ, ಲಕ್ಷ್ಮಣ ರಾಯರೂ ಮದರಾಸಿಗೆ ಪ್ರಯಾಣ ಬೆಳೆಸಿದರು. ಆದರೆ ಮೊಟ್ಟ ಮೊದಲು ಪತಿಯ ಗೃಹಕ್ಕೆ ತೆರಳುವಾಗ ಸ್ವಾಭಾವಿಕವಾಗಿ ಯುವತಿಯರಿಗಿರಬೇಕಾದ ಹುರುಪೂ, ಉತ್ಸಾಹವೂ ಸ್ವರ್ಣಗೌರಿಯ ನೊಂದ ಹೃದಯದಲ್ಲಿ ಜನಿಸಲಿಲ್ಲ. ಪತಿಯು ತನ್ನನ್ನು ಸ್ವೀಕರಿಸುವರೋ, ಇಲ್ಲವೋ ಎಂಬ ಶಂಕೆಯಲ್ಲಿಯೂ, ಭೀತಿಯಲ್ಲಿಯೂ ಅವಳಿಗೆ ಅನ್ನಾಹಾರವೇ ಸೇರದೇ ಹೋಯಿತು. ಸದಾ ಒಂದು ರೀತಿಯಾದ ವ್ಯಾಕುಲದಿಂದ ಪೀಡಿತಳಾಗಿ ತವಕಪಡುತ್ತಲಿದ್ದಳು.

ಮರುದಿನ ಬೆಳಗ್ಗೆ ಏಳು ಘಂಟೆಗೆ ಸರಿಯಾಗಿ ಅವರೀರ್ವರೂ ಮದ ರಾಸನ್ನು ತಲುಪಿ, ವೇಣುಗೋಪಾಲನ ಮನೆಯನ್ನು ಹೋಗಿ ಸೇರಿದರು. ಆಗ ವೇಣುವು ನಡುಮನೆಯಲ್ಲಿ ಒಂದು ಕುರ್ಚಿಯಲ್ಲಿ ಕುಳಿತು ''ಹಿಂದು'' ವರ್ತಮಾನ ಪತ್ರಿಕೆಯನ್ನು ಓದುತ್ತಲಿದ್ದನು. ಅವರುಗಳ ಆಗಮನವನ್ನು ಕಂಡೂ ಕಾಣದವನಂತೆ ನಟಿಸಿ, ಪತ್ರಿಕೆಯನ್ನು ಮತ್ತಷ್ಟು ಗಮನಿಸಿ ಓದಲು ತೊಡಗಿದನು. ಲಕ್ಷ್ಮಣರಾಯರು ಐದು ನಿಮಿಷಗಳವರೆಗೆ ಕದಲದೆ ನಿಂತ ಲ್ಲಿಯೇ ನಿಂತಿದ್ದವರು ಅಲ್ಲಿಯೇ ಒಂದು ಕುರ್ಚಿಯಲ್ಲಿ ಹೋಗಿ ಕುಳಿತರು. ಸ್ವರ್ಣಗೌರಿಯು ಕದದ ಮೂಲೆಯೊಂದನ್ನು ಹುಡುಕಿಕೊಂಡು ಹೋಗಿ,

ಕಾಲಿನ ಹೆಬ್ಬೆಟ್ಟಿನಿಂದ ನೆಲವನ್ನು ಕೆರೆಯುತ್ತಾ, ಸೀರೆಯ ಸೆರಗಿನ ತುದಿಯನ್ನು ಹಿಡಿದು ಕೈಯಲ್ಲಿ ಚೇಷ್ಟೆ ಮಾಡುತ್ತಾ ತಲೆಬಾಗಿಸಿಕೊಂಡು ನಿಂತಳು. ಕೊನೆಗೆ ಲಕ್ಷ್ಮಣರಾಯರು ಅಳಿಯಂದಿರ ಈ ಮೌನವ್ರತವನ್ನು ಕಂಡು ಸಹಿಸಲಾರದೆ "ನಾನು ಹೋಗಿಬರಲೇ ಅಳಿಯಂದಿರೇ ?" ಎಂದು ಮಾತನ್ನು, ಪ್ರಾರಂಭಗೊಳಿಸಿದರು.

ಆದರೆ ಅವರಿಂದ 'ಪಿಟ್' ಎಂದು ಒಂದುಮಾತು ಸಹ ಹೊರಡಲಿಲ್ಲ; ರಾಯರು ಸ್ವಲ್ಪಕಾಲ ಕಾದುನೋಡಿದರು. ಅನಂತರದಲ್ಲಿ "ಸರಿ, ನಿಮ್ಮ ಪದಾರ್ಥವನ್ನು ನಿಮಗೆ ತಂದು ಒಪ್ಪಿಸಿದುದಾಯಿತು, ನಾನು ಹೋಗಿ ಬರುತ್ತೇನೆ. ಸ್ವರ್ಣಾ ! ಪತಿಗೆ ತಕ್ಕಹಾಗೆ ನಡೆದುಕೊಂಡು, ಅವರ ಮನಸ್ಸನ್ನು ಒಲಿಸಿಕೊಳ್ಳುವುದು ನಿನ್ನ ಕೈಯಲ್ಲಿದೆ. ನಾನು ಹೋಗಿಬರುತ್ತೇನಮ್ಮಾ" ಎಂದು ಹೊರಟುಹೋದನು.

ಮಾವನು ಹೊರಟುಹೋದನಂತರ ಸ್ವರ್ಣಳಿಗೆ ಏನೊಂದೂ ತೋರದಾಯಿತು. ಗಾಬರಿಗೊಂಡು ಕಣ್ಣು ಕಣ್ಣು ಬಿಟ್ಟಳು. ವೇಣುವಂತೂ ಅವಳನ್ನು ಕಣ್ಣೆತ್ತಿಯೂ ನೋಡಲಿಲ್ಲ. ಮೆಲ್ಲಗೆ ಧೈರ್ಯ ತಂದುಕೊಂಡು "ಸ್ನಾನಮಾಡಿ, ಅಡಿಗೆ ಮಾಡಲೆ ?'' ಎಂದು ತಡವರಿಸಿ ತಡವರಿಸಿ ನುಡಿದಳು.

ವೇಣುವು "ಓಹೋ, ನಿನಗೆ ಅಡಿಗೆಮಾಡಲು ಸಹ ಬರುವುದೇನು ? ಎಂದು ಪರಿಹಾಸ್ಯವಾಗಿ ನುಡಿದನು

ಅವನ ಪರಿಹಾಸ್ಯದ ನುಡಿಯು ಆ ಸುಂದರಿಯ ನೊಂದ ಹೃದಯದಲ್ಲಿ ಮತ್ತಷ್ಟು ವೇದನೆಯನ್ನು ಹೆಚ್ಚಿಸಿತು.

"ಸುಮಾರಾಗಿ ಬರುತ್ತದೆ.''

"ಸುಮಾರಾಗಿತಾನೇ ಬರುತ್ತದೆ ? ಅನ್ನವೊಂದು ಮಾತ್ರ ಬರುತ್ತದೆಯೋ ? ಅಥವಾ ಸಾರು ಮಾಡಲು ಸಹ ಬರುತ್ತದೆಯೊ ? ನನ್ನ ಮನೆಯಲ್ಲಿ ಅಡಿಗೆಯವನಿರುವನೆಂದು ನಂಬಿದ್ದೆಯೇನು ? ಅಥವಾ ನಿನ್ನ ಗಂಡನು ದಾಸಾನುದಾಸನಾಗಿ ನಿನ್ನ ತೌರಮನೆಯಲ್ಲಿ ಬಂದು ಬಿದ್ದುಕೊಂಡು ನಿನಗೆ ಸೇವೆಮಾಡುವನೆಂದು ನಂಬಿದ್ದೀಯೊ ? ಇದುವರೆಗೂ

ನಾನಂತೂ ಹೋಟಲಿನಿಂದ ಅನ್ನ ತರಿಸಿ ಊಟಮಾಡುತ್ತಲಿದ್ದೇನೆ, ಇಷ್ಟ ವಿದ್ದರೆ ಅಡಿಗೆಮಾಡು, ಇಲ್ಲವಿದ್ದರೆ ತೌರವನೆಗೆ ಹೊರಡು. ನನ್ನ ೭೫ ರೂ. ಸಂಬಳದಲ್ಲಿ ಅಡಿಗೆಯವನನ್ನು ನೇಮಿಸಲು ಸಾಧ್ಯವಿಲ್ಲ. ಸ್ವರ್ಣಾ, ಇನ್ನೊಂದು ವಿಷಯವನ್ನು ಹೇಳಲು ಮರೆತುಹೋದೆ. ನೀನು ನನ್ನೊಡನೆ ಇರುವುದಾದರೆ ನಿನ್ನ ಮತ್ತು ನಿನ್ನ ತೌರಮನೆಯವರ ಬಾಂಧವ್ಯವನ್ನು ಮರತೇ ಬಿಡಬೇಕು. ಅವರಲ್ಲಿ ಯಾರೊಬ್ಬರೂ ಇಲ್ಲಿಗೆ ಬರಬಾರದು, ನೀನೂ ಅಲ್ಲಿಗೆ ಹೋಗಕೂಡದು, ತಿಳಿಯಿತೇನು? ಹಾಗಾದರೆ ನೀನಿಲ್ಲಿ ಇರಬಹುದು. ಇಲ್ಲದಿದ್ದ ಪಕ್ಷದಲ್ಲಿ ಇಂದು ರಾತ್ರಿಯ ಗಾಡಿಗೇ ನಿನ್ನನ್ನು ಬೆಂಗಳೂರಿಗೆ ಹತ್ತಿಸಿಬಿಡುತ್ತೇನೆ, ಏನು?" ಎಂದು ತೀರ್ಮಾನವಾಗಿ ಹೇಳಿಬಿಟ್ಟನು.

ಈ ಲೋಕದಲ್ಲಿ ಸತಿಗೆ ಪತಿಗಿಂತ ಹತ್ತಿರದ ಬಂಧು ಬೇರೆ ಯಾರಿರುವರು? ಹತ್ತು ತಿಂಗಳಕಾಲ ಹೊತ್ತು, ಹೆತ್ತು, ಸಾಕಿ, ಸಲಹಿದ ತಾಯಿಯೂ, ತನ್ನ ಉದರದಲ್ಲಿ ಜನಿಸಿದ ಮಕ್ಕಳೂ ಕೂಡ ದೂರದವರೇ ಹೌದು. ಈ ತತ್ವವನ್ನು ನಮ್ಮ ಸ್ವರ್ಣಗೌರಿಯು ಈ ಎರಡು ವರ್ಷಗಳ ಅವಧಿಯಲ್ಲಿ ಚನ್ನಾಗಿ ಮನಗಂಡಿದ್ದಳು. ಪ್ರತಿನಿತ್ಯವೂ ತನ್ನ ಪತಿಯ ಸಂದರ್ಶನ ಭಾಗ್ಯವು ಲಭಿಸಿದಲ್ಲಿ, ಅದಕ್ಕಿಂತ ಮಿಗಿಲಾದ ಸುಖ ಸಂತೋಷವು ತನಗೆ ಬೇರೊಂದಿಲ್ಲವೆಂದು ಭಾವಸಿದವಳಾಗಿ ಆ ಸತೀರತ್ನವು ತನ್ನ ಪ್ರಾಣೇಶ್ವರನ ಒಡಂಬಡಿಕೆಗೆ ತಲೆಬಾಗಿದಳು.

* * * *

ಸ್ವರ್ಣಗೌರಿಯು ಸಂಸಾರವನ್ನು ಹೂಡಿದ ಹೊಸದರಲ್ಲಿ ಬಹಳ ಶ್ರಮಪಟ್ಟಳು. ಶ್ರೀಮಂತರ ಮನೆತನದಲ್ಲಿ, ಮುದ್ದಾಗಿ ಬೆಳೆದ ಮುದ್ದು ಗುವರಿಯಲ್ಲವೇ ಅವಳು. ಒಲೆಯನ್ನು ಹೊತ್ತಿಸಲು ಸಹ ಅವಳಿಗೆ ಬಾರದು. ಅವಳ ತೌರಮನೆಯಲ್ಲಿ ಅವಳು ಒಂದು ದಿನವಾದರೂ ಅಡಿಗೆಯ ಮನೆಯ ಹೊಸಲನ್ನು ಮೆಟ್ಟಿದವಳಲ್ಲ. ಆದರೆ ಆ ಲತೆಯು ಪತಿಯ ಪ್ರೇಮವೆಂಬ ಮರದ ರೆಂಬೆಯನ್ನು ತಬ್ಬಿಕೊಂಡು, ಅದರ ಸಹಾಯದಿಂದ ಅನಾಯಾಸವಾಗಿ ಕಲಕಲನೆ ತಳಿರುಬಿಟ್ಟು ಬರಿಯ ಕಲ್ಲು ನೆರೆದಿನ್ನ ಭೂಮಿಯಲ್ಲಿಯೂ ಸಹ ಸೊಂಪಾಗಿ ಬೆಳೆದು ಪುಷ್ಟಿಹೊಂದಿತು. ವೇಣಾವಿಗೆ

ಅಡಿಗೆಯ ವಿಷಯ ಸ್ವಲ್ಪ ತಿಳಿದಿತ್ತು. ತನ್ನ ನಲ್ಲೆಗೆ ಸದೇ ಪದೇ ಕೆಲಸ
ಗಳನ್ನು ಕಲಿಸಿಕೊಟ್ಟು, ಶೀಘ್ರದಲ್ಲಿಯೇ ಅವಳನ್ನು ಅತ್ಯಂತ ಚತುರಳಾದ
ಗೃಹಿಣಿಯಾಗಿ ತರಬೇತುಮಾಡಿದನು. ಸತಿಪತಿಯರ ಅಂತರಂಗವು ಒಂದು
ಗೂಡಿ ಆ ಪುಟ್ಟ ಸಂಸಾರವು ಅಮೃತವಾಗಿ ಶೋಭಿಸಿತು.

ಈಗ ಸ್ವರ್ಣಳು ಪತಿಯ ಗೃಹವನ್ನು ಪ್ರವೇಶಿಸಿ, ಸಂಸಾರ ಹೂಡಿ
ಮೂರು ವರ್ಷಗಳು ತುಂಬುತ್ತಾ ಬಂದಿತು. ಆ ಸತಿಪತಿಗಳ ಪ್ರೇಮವೃಕ್ಷ
ದಲ್ಲಿ ಒಂದು ಫಲವೂ ಬಿಟ್ಟಿತು. ಅದೇ ನಮ್ಮ ಪುಟಾಣಿ ಪ್ರೇಮಕುಮಾರ.
ಅವನಿಗೆ ಅವನ ತಂದೆ "ಪ್ರೇಮಕುಮಾರ" ನೆಂದೇ ಹೆಸರಿಟ್ಟರು ಅಕೋ ?
ಸ್ವರ್ಣಳ ಕಂಕುಳಲ್ಲಿ ಕುಳಿತು ತನ್ನ ಪುಟಾಣಿ ಕೈಗಳಿಂದ ಚಪ್ಪಾಳೆ ತಟ್ಟುತ್ತಾ
"ಕಿಲಕಿಲ"ನೇ ನಗುತ್ತಲಿರುವನಲ್ಲಾ, ಅವನೇ ! ಆದರೆ ಈ ಮೂರು ವರ್ಷ
ಗಳಲ್ಲಿ ಅಪ್ಪಿ ತಪ್ಪಿ ಒಂದು ಸಲವಾದರೂ ತನ್ನ ತಾಯಿ ತಂದೆಯರ ಸಂದರ್ಶನ
ಭಾಗ್ಯವು ಲಭಿಸಲಿಲ್ಲವಲ್ಲಾ ಎಂಬ ಕೊರತೆಯು ಅವಳ ಮನದಲ್ಲಿ ಒಳ
ಗೊಳಗೇ ಕುದಿಯುತ್ತಲಿದ್ದಿತು, ಆದರೆ ಅವಳು ತನ್ನ ಈ ಕೊರತೆಯನ್ನು
ಎಂದೂ ಹೊರಗೆಡವುತ್ತಲಿರಲಿಲ್ಲ. ಒಂದೊಂದುವೇಳೆ ತನ್ನ ಪತಿಗೆ ತಿಳಿಯ
ದಂತೆ ಅತ್ತು ಕರೆದು ಹೃದಯವನ್ನು ಹಗುರಮಾಡಿಕೊಳ್ಳುವಳು.

ಅಂದು ಸಂಜೆ ಮನೆಯ ಕೆಲಸಗಳನ್ನು ಮುಗಿಸಿಕೊಂಡು ಮಗುವನ್ನೆತ್ತಿ
ಕೊಂಡು ಪತಿಯ ಆಗಮನವನ್ನು ನಿರೀಕ್ಷಿಸುತ್ತಾ ಸ್ವರ್ಣಳು ಬೀದಿಯ ಬಾಗಿ
ಲಲ್ಲಿ ನಿಂತಿದ್ದಳು, ಸ್ವಲ್ಪ ಹೊತ್ತಿನಲ್ಲೇ ವೇಣುವು ಮನೆಯನ್ನು ಬಂದುಸೇರಿ
ದವನಾಗಿ, ಅಂಗಿಯನ್ನು ಬಿಚ್ಚಿ ಸ್ಟ್ಯಾಂಡಿನಲ್ಲಿ ತಗಲುಹಾಕಿ ಕುರ್ಚಿಯೊಂದ
ರಲ್ಲಿ ಕುಳಿತು, ಕ್ರಾಪನ್ನು ನೇವರಿಸಿಕೊಳ್ಳುತ್ತಾ "ಸ್ವರ್ಣಾ ! ಈದಿನ ರಾತ್ರಿಯ
ಗಾಡಿಯಲ್ಲಿ ನಾವು ಬೆಂಗಳೂರಿಗೆ ಹೊರಡಬೇಕು ! ಶೀಘ್ರವಾಗಿ ಸಾಮಾನು
ಗಳನ್ನು ಕಟ್ಟು, ರಜವೂ ದೊರೆತಿದೆ" ಎಂದು ಸವಿಯಾಗಿ ನುಡಿದನು.

ಈ ವಾರ್ತೆಯನ್ನು ಕೇಳಿ ಸ್ವರ್ಣಳು ಅಪ್ರತಿಭಳಾದಳು, ತನ್ನ ಕಿವಿಗ
ಳನ್ನೇ ನಂಬಲಾರದೆ ಹೋದಳು. ಬೆಪ್ಪು ಬೆಪ್ಪಾಗಿ ಗಂಡನಕಡೆಗೆ ನೋಡಿ
ದಳು. ತಾಯಿಯ ಸೊಂಟದಲ್ಲಿದ್ದ ಮಗುವಿಗೆ ತಂದೆಯ ಹಸನ್ಮುಖವನ್ನು
ಕಂಡು ಏನು ತೋರಿತೋ ಏನೋ "ಅ ತ್ತೇ ತ್ತೇ ತ್ತೇ" ಎಂದು ತೊದಲ್ನುಡಿ
ನುಡಿಯುತ್ತಾ ಆನಂದದೊಡನೆ ತಂದೆಯ ಕಡೆಗೆ ನೆಗೆದು ತಂದೆಯ ಮಡಿಲಲ್ಲಿ

ಕುಳಿತು, ವೇಣುವಿನ ಕೈಯನ್ನು ಹಿಡಿದೆಳೆದು ಬಾಯಲ್ಲಿ ತುರುಕಿ
ಕೊಂಡು ಸವಿಯಲು ತೊಡಗಿತು. ವೇಣುವು ಮಗುವನ್ನು ಬಾಚಿ ತಬ್ಬಿ
ಕೊಂಡು ಮುದ್ದಿಡುತ್ತಾ "ಸ್ವರ್ಣಾ, ಜನ್ಮಶತ್ರುವಾದರೂ ಕೂಡ ಕ್ಷಮಾಪಣೆ
ಬೇಡಿದಲ್ಲಿ ಕ್ಷಮಿಸದೇ ಇರುವುದು ಯೋಗ್ಯನಾದವನಿಗೆ ಲಕ್ಷಣವಲ್ಲ. ಇಂದು
ನಿನ್ನ ತಂದೆಯಿಂದ ಪತ್ರ ಬಂದಿದೆ. ಇಕೋ" ಎಂದು ಜೇಬಿನಿಂದ ಪತ್ರ
ವನ್ನು ತೆಗೆದು ಸ್ವರ್ಣಳ ಕೈಯಲ್ಲಿ ಕೊಟ್ಟನು. ಪುನಃ "ರಾತ್ರಿ ಹೊರಟು
ಬೆಂಗಳೂರಿಗೆ ಹೋಗಿ ಹತ್ತು ದಿನಗಳಿದ್ದು ಬರೋಣ ಬಾ. ನಾನೂ ಸಹ
ಉದ್ಯೋಗದಲ್ಲಿ ಸೇರಿದಾಗಿನಿಂದ ಒಂದು ದಿನವಾದರೂ ರಜ ತೆಗೆದುಕೊಳ್ಳ
ಲಿಲ್ಲ" ಎಂದು ಮಾತನ್ನು ಮುಗಿಸಿದನು.

ಸ್ವರ್ಣಳು ಕಾಗದವನ್ನು ಬಿಚ್ಚಿ ಓದಿದಳು.

"ಮ|| ರಾ|| ಶ್ರೀ ಅಳಿಯಂದಿರಿಗೆ ಸವಿಯನುಡಿಗಳು ತಮ್ಮ ವಿಷಯದಲ್ಲಿ
ನಾನು ಮಾಡಿದ ತಪ್ಪಿತವನ್ನು ದಯವಿಟ್ಟು ಕ್ಷಮಿಸಬೇಕು. ಸ್ವತಂತ್ರವಾಗಿ
ಹಾರಿಕೊಂಡು ಸ್ವೇಚ್ಛೆಯಾಗಿರಬೇಕೆಂದು ಬಯಸಿದ ಗಿಣಿಯನ್ನು ಹಿಡಿದು
ತಂದು ಪಂಜರದಲ್ಲಿ ಕೂಡಿಹಾಕಲು ಪ್ರಯತ್ನಿಸಿದೆ. ಈ ದುಷ್ಪ್ರಯತ್ನದ
ನಿಮಿತ್ತವಾಗಿ ಈ ಮೂರು ವರ್ಷಗಳ ಕಾಲ ನಾನೂ ತಕ್ಕ ದಂಡನೆಯನ್ನು
ಅನುಭವಿಸಿದುದಾಯಿತು. ಅತ್ಯಂತ ಪ್ರೀತಿ ವಾತ್ಸಲ್ಯದಿಂದ ಲಾಲಿಸಿ ಪಾಲಿಸಿ
ಬೆಳಸಿದ ಮುದ್ದುಗುವರಿಯನ್ನು ಇಷ್ಟೊಂದು ದೀರ್ಘಕಾಲವಾಗಿ ಕಾಣದೆ
ಕೊರಗಿ ಕೊರಗಿ ನನ್ನ ಪತ್ನಿಯು ಹಾಸಿಗೆಯನ್ನು ಹಿಡಿದು ಮಲಗಿರುವಳು.
ಇದೀಗ ನನಗೂ ನನ್ನ ಅಹಂಕಾರ ಕಣ್ಣುಪರೆ ತೊಲಗಿ ಜ್ಞಾನವೆಂಬ ಕಣ್ಣು
ಪ್ರಕಾಶಗೊಂಡಿದೆ. ದಯವಿಟ್ಟು ನನ್ನನ್ನು ಕ್ಷಮಿಸಿ ಕೊನೆಯಪಕ್ಷ ಹದಿನೈದು
ದಿನಗಳಾದರೂ ರಜ ತೆಗೆದುಕೊಂಡು ಮಗುವಿನೊಡನೆಯೂ, ಸೌಭಾಗ್ಯವತಿ
ಸ್ವರ್ಣಳೊಡನೆಯೂ ನಮ್ಮ ಮನೆಗೆ ಬಂದಿದ್ದು ಹೋಗಬೇಕೆಂದು ಪ್ರಾರ್ಥನೆ.
ತಮಗೆ ಈಗ ೬೦೦ ರೂ. ಸಂಬಳವೆಂದು ಮೊನ್ನೆ ತಾನೇ ಯಾರೋ ಹೇಳಿ
ದರು. ಅತ್ಯಾನಂದವಾಯಿತು."

# ಮೊಮ್ಮಗು

"ಅಮ್ಮಾ, ಅಮ್ಮಾ! ಇಗೋ ನಿನಗೊಂದು ಮೊಮ್ಮಗಳು ಬಂದಿದ್ದಾಳೆ" ಎಂದು ರಾಮು ಐದು ವರ್ಷದ ಬಾಲಕಿಯೊಬ್ಬಳ ಕೈಹಿಡಿದುಕೊಂಡು ಮನೆಯೊಳಗೆ ಪ್ರವೇಶಿಸಿದನು.

"ಯಾರೋ ಈ ಮಗು?"

"ನಿನ್ನ ಮೊಮ್ಮಗಳು ಅಮ್ಮಾ!"

"ಇದೆಂತಹ ಹುಡುಗಾಟವೋ ರಾಮೂ ನಿನ್ನದು!"

"ನಿನ್ನ ಮೊಮ್ಮಗಳೇ ಇವಳು ಅಮ್ಮಾ!"

"ಅಯ್ಯೋ ನಾನವಕ್ಕೆ ಕೊಟ್ಟಿಡಲಿಲ್ಲವಲ್ಲೋ ರಾಮೂ ಬಾಮ್ಮಾ ಮಗೂ!" ಎಂದು ಸುಬ್ಬಮ್ಮನು ಗೂಡಿನಲ್ಲಿದ್ದ ಸೀಸೆಯನ್ನು ತೆರೆದು ಕಲ್ಲುಸಕ್ಕರೆಯೊಂದನ್ನು ಮಗುವಿನ ಕೈಯಲ್ಲಿಟ್ಟಳು.

ಬಳಿಕ ಮೆಲುದನಿಯಲ್ಲಿ "ಏನೋ ರಾಮೂ ಆ ಶಿವಮೊಗ್ಗೆಯ ಹುಡುಗಿಯನ್ನು ಮರುಮಾತಿಲ್ಲದೆ ಮದುವೆಮಾಡಿಕೊಂಡುಬಿಡೋ ಅಂದ್ರೆ ನೀನು ಆಗೋಲ್ಲಾಂತ [illegible] ಹಠಮಾಡುತ್ತೀಯೋ ನಾನು ಕಾಣೆ."

"ಯಾಕಮ್ಮಾ ನನಗೆ ಕೃಷ್ಣದೇವರ ಹೆಸರನ್ನಿಡದೆ ರಾಮದೇವರ ಹೆಸರನ್ನಿಟ್ಟೆ? ಆದುದರಿಂದ ಈ ಜನ್ಮದಲ್ಲಿ ರಾಮಾವತಾರವನ್ನೇ ತಾಳಿರುತ್ತೇನೆ. ಮುಂದಿನ ಜನ್ಮದಲ್ಲಿ ಬೇಕಾದರೆ ಕೃಷ್ಣಾವತಾರವನ್ನು ತಾಳಿದರಾಯಿತೇನೇ?" ಎಂದು ಕಿಲಕಿಲನೆ ನಕ್ಕನು.

ಸುಬ್ಬಮ್ಮನಿಗಂತೂ ಏನೂ ತೋಚದಾಯಿತು. "ಮಹರಾಯನಾಗಿರಪ್ಪಾ. ಬೇಡವೆಂದವರಾರು? ಒಳ್ಳೆಯ ಹೆಂಡತಿಯನ್ನೇ ನೋಡಿ, ಕಟ್ಟಿಕೊಂಡಿರುವೆಯಲ್ಲಾ" ಎಂದು ಗೊಣಗಲು ತೊಡಗಿದಳು. ಅಷ್ಟರೊಳಗಾಗಿ ಬೀದಿಯ ಬಾಗಿಲಲ್ಲಿ ನಿಂತು ಅವನ ಸ್ನೇಹಿತನೊಬ್ಬನು ಕರೆಯಲಾಗಿ ರಾಮು "ಮಾಲತೀ, ಅಜ್ಜಿಯ ಜೊತೆಯಲ್ಲಿ ಆಡಿಕೊಂಡಿರು-

ಇಕೋ ನಾನು ಬಂದೆ' ಎಂದು ಹೊರಟು ಹೋದನು. ಮಗು ಮಾಲತಿಯೂ, ಅಜ್ಜಿಯೂ ಅರೆಕ್ಷಣದಲ್ಲಿ ಗೆಳೆಯರಾಗಿಬಿಟ್ಟರು. ಸ್ವಲ್ಪ ಹೊತ್ತು ಕಳೆದ ಬಳಿಕ ಸುಬ್ಬಮ್ಮನು ಮಗುವಿನ ಕೈಗೊಂದು ಬೊಂಬೆಯ ಪುಸ್ತಕವನ್ನು ಕೊಟ್ಟು, "ಚಿನ್ನಾ ಈ ಗೊಂಬೆಗಳನ್ನು ನೋಡುತ್ತಲಿರು. ನಾನು ಒಲೆ ಹಚ್ಚಿ, ಬೇಳೆ ಬೇಯಲು ಹಾಕಿಬರುತ್ತೇನೆ" ಎಂದು ಎದ್ದಳು.

ಮಾಲತಿಯು "ಯಾಕಜ್ಜೀ ನೀನೇ ಅಡಿಗೆ ಮಾಡಬೇಕೇನು ? ನಮ್ಮ ನೀಲಿ ನಮ್ಮಮ್ಮನೇ ಹತ್ರ ಅಡಿಗೆ ಮಾಡೋದು—ನಮ್ಮಪ್ಪ ಒಂದು ಕೆಲಸವನ್ನೂ ಮಾಡರು. ನಿಮ್ಮ ಮನೇ ಮಾಮೀ ಎಲ್ಲಿ? ಅವರನ್ನು ಅಡಿಗೇ ಮಾಡ ಹೇಳಿ ನೀವು ಬಂದುಬಿಡಿ ಅಜ್ಜೀ, ನನ್ನೊತನೆ ಆಡುವುದಕ್ಕೆ" ಎಂದಳು.

"ಇಲ್ಲನಮ್ಮ ಚಿನ್ನ, ನಮ್ಮ ಮನೇ ಮಾಮೀ ಊರಿಗೆ ಹೋಗಿದ್ದಾಳೆ. ನಾನೇ ಅಡಿಗೆ ಮಾಡಬೇಕೇನೆ—"

"ಅಜ್ಜೀ, ನಮ್ಮನೇಲೂ ನಮ್ಮಪ್ಪ ಸೋದರಪ್ಪನೂ ಊರಿಗೆ ಹೋಗಿದ್ದಾರೆ. ಏನಜ್ಜೀ, ಮಾವನನ್ನು ಊರಿಗೆ ಕಳುಹಿ ಮಾಮಿಯನ್ನು ಈ ಕೆಲಸ್ಕೇ ಕರೆತರಲು ಹೇಳಿಬಿಡಿ ಅಜ್ಜೀ. ನೀವು ಹೋಗಿ ಅಡಿಗೆ ಮಾಡುವುದೇನು ? ಪಾಪ, ಅಜ್ಜೀ ! ನಾನು ಹೋಗಿ ಮಾವನಿಗೆ ಹೇಳುತ್ತೇನೆ." ಎಂದು ಬೀದಿಯ ಕಡೆಗೆ ಓಡಿದಳು.

ಮಗುವಿನ ತೊದಲ್ನುಡಿಗಳನ್ನು ಕೇಳಿ ರಾಮುವಿನ ತುಟಿಯಲ್ಲಿ ವೇದನೆಯಿಂದೊಡಗೂಡಿದ ನಗೆಮೂಡಿತು.

* * * *

ರಾಮುವಿನ ಹೆಸರು ರಾಮಚಂದ್ರನೆಂಬುದು. ರಾಮುವಿನ ತಂದೆಯು ತೀರಿಹೋದಾಗ ರಾಮುವಿಗೆ ಎರಡೇ ವರ್ಷ ತುಂಬಿತ್ತು. ಅಂದಿನಿಂದ ರಾಮುವಿಗೆ ತಾಯಿ ತಂದೆಯರಿಬ್ಬರೂ ಸುಬ್ಬಮ್ಮನೇ. ತಾಯಿ—ಮಗು ಈರ್ವರೂ ಸುಬ್ಬಮ್ಮನ ತಂದೆಯು ತೀರಿ ಹೋಗುವವರೆಗೂ ಸುಬ್ಬಮ್ಮನ ತೌರುಮನೆಯಲ್ಲಿದ್ದರು. ತಂದೆಯವರು ತೀರಿಹೋದ ಬಳಿಕ ಸುಬ್ಬಮ್ಮನು ಅಣ್ಣನ ಮನೆಯಲ್ಲಿರಲು ಇಷ್ಟಪಡದೆ, ತನ್ನ ಪತಿಯ ಮೂಲಕ ದೊರೆತಿದ್ದ

ಸ್ವಲ್ಪ ಹಣವನ್ನೂ, ತಂದೆಯು ತನ್ನ ಹೆಸರಿಗೆ ಬರೆದಿಟ್ಟು ಹೋಗಿದ್ದ ಒಂದೆ ರಡು ಸಾವಿರ ರೂಪಾಯಿಗಳನ್ನೂ ತೆಗೆದುಕೊಂಡು ಬೆಂಗಳೂರಿಗೆ ಬಂದು ಬಸವನಗುಡಿಯಲ್ಲಿ ಸಣ್ಣದೊಂದು ಮನೆಯನ್ನು ಮಾಡಿಕೊಂಡು ಹುಡುಗ ನನ್ನು ಓದಿಸಲಾರಂಭಿಸಿದಳು. ತನ್ನ ಕಂದನು ಒಂದು ವರ್ಷದ ಬಾಲಕ ನಾಗಿರುವಾಗಲೇ ಸುಬ್ಬಮ್ಮನು ತನ್ನ ಮುದ್ದು ಕಂದನನ್ನು ಚೆನ್ನಾಗಿ ಓದಿಸ ಬೇಕು, ಅವನು ಚೆನ್ನಾಗಿ ಓದಿ ಪಾಸುಮಾಡಿ, ಉನ್ನತವಾದುದೊಂದು ಉದ್ಯೋಗವನ್ನು ವಹಿಸುವನು, ಹಲವು ಗಣ್ಯಪುರುಷರೂ, ಶ್ರೀಮಂತರೂ ನಾನು ತಾನೆಂದು ಅವನಿಗೆ ಹೆಣ್ಣು ಕೊಡಲು ಬರುವರು. ಶ್ರೀಮಂತ ಮನೆ ತನದ ಸುಂದರ ಕನ್ಯೆಯೋರ್ವಳು ಬೇಕಾದಷ್ಟು ಉಡುಗೊರೆಯೊಡನೆ ತನಗೆ ಸೊಸೆಯಾಗಿ ಬರುವಳು. ಅವಳನ್ನು ಹಾಗೆ ಇಟ್ಟುಕೊಳ್ಳಬೇಕು, ಹೀಗೆ ಇಟ್ಟುಕೊಳ್ಳಬೇಕು ತಾನು ಲೋಕಕ್ಕೇ ಒಬ್ಬ ಆದರ್ಶ ಅತ್ತೆಯಾಗಿ ಬೆಳಗ ಬೇಕು ಎಂದೆಲ್ಲಾ ಮನೋರಾಜ್ಯವನ್ನು ಕಲ್ಪಿಸಿಕೊಳ್ಳುವಳು. ಅವಳ ಮುದ್ದು ಬಾಲಕನೂ ತಾಯ ಮಮತೆಯೆಂಬ ಅಮೃತಮಯವಾದ ಲಾಲನೆ ಪಾಲನೆಯಲ್ಲಿ ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಲಿದ್ದನು. ಪ್ರತಿಯೊಂದು ತರಗತಿಯಲ್ಲಿಯೂ ಉತ್ತಮ ದರ್ಜೆಯಲ್ಲಿ ಉತ್ತೀರ್ಣನಾಗಿ ಕೊನೆಗೆ ಬಿ. ಎಸ್ ಸಿ. ಆನರ್ಸ್ ಪರೀಕ್ಷೆಯಲ್ಲಿಯೂ ಸಹ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದಿದನು. ಬಳಿಕ ಬೆಂಗಳೂರಿನ ಸೆಕ್ರೆಟೇರಿಯಟ್ ಕಛೇರಿ ಯಲ್ಲೇ ಉತ್ತಮವಾದೊಂದು ಉದ್ಯೋಗವೂ ಸಹ ದೊರಕಿತು. ಕೊಯಂಬ ತ್ತೂರಿನಲ್ಲಿ ಕೀರ್ತಿ ಹೊಂದಿದ ಅಡ್ವೋಕೇಟರಾಗಿದ್ದ ರಾವ್ ಬಹದ್ದೂರ್ ರಘುನಾಥರಾಯರ ಮುದ್ದುಗುವರಿಯಾದ ಸರಸ್ವತಿಗೂ ಚಿ. ರಾಮಚಂದ್ರ ನಿಗೂ ಅದೇ ವರ್ಷ ಬಹಳ ವಿಜೃಂಭಣೆಯೊಡನೆ ವಿವಾಹವು ಜರುಗಿತು. ಸುಬ್ಬಮ್ಮನ ಹಗಲು ಗನಸುಗಳೆಲ್ಲವೂ ಸಾಂಗವಾಗಿ ಫಲಿಸಿದವು. ಸುಬ್ಬ ಮ್ಮನು ಸೊಸೆಯ ಅತುಳ ಸೌಂದರ್ಯವನ್ನೂ ಕಂಡು ಹಿಗ್ಗಿದಳು. ಅಡ್ವೋ ಕೇಟ್ ರಘುನಾಥರಾಯರಿಗೆ ನಾಲ್ಕು ಹುಡುಗಿಯರೂ, ಮೂರು ಹುಡುಗರೂ ಉಂಟು. ಎಲ್ಲರಿಗೂ ಹಿರಿಯವಳು ಸರಸ್ವತಿ. ರಾಯರ ಅತ್ಯಾಡಂಬರವಾದ [illegible] ಕಂಡು ಕೆಲವರು "ಅವರಿಗೇನಂತೆ ಲಕ್ಷಾಧಿಪತಿ. ಕೊಟ್ಟಿಟ್ಟ ವರು. ಅದೃಷ್ಟವೆಂದರೆ ಎಲ್ಲರನ್ನೂ ಹೇಳಲು ಸಾಧ್ಯವೆ? ನಮ್ಮ ರಘು

ಹೋದುದರಿಂದ ಆಗಲೂ ಅವನ್ನು ಓದಿಸಲು ಸಾಧ್ಯವಾಗಲಿಲ್ಲ. ಅಷ್ಟರ
ಲ್ಲಿಯೇ ರಾಯರು ಕಣ್ಣುಮುಚ್ಚಿಬಿಟ್ಟರು. ಅವರು ಸತ್ತ ದುಃಖ ಸ್ವಲ್ಪ ಶಮ
ನವಾದ ಬಳಿಕ ಬೀಗತಿಯು ಶಾಂತಿ ಪ್ರಸ್ತಕ್ಕೆ ಒಳ್ಳೆಯ ಮುಹೂರ್ತ ನಿಷ್ಕರ್ಷೆ
ಮಾಡಿ ದಯವಿಟ್ಟು ತಿಳಿಸಿದರೆ ಹುಡುಗಿಯನ್ನು ತಂದುಬಿಡುವುದಾಗಿ ಸುಬ್ಬ
ಮ್ಮನಿಗೆ ಪತ್ರ ಬರೆದಳು. ಊರ ಜನರು ಅದೆಷ್ಟುತರಹ ಹೇಳಿಕೊಂಡರೂ
ಸುಬ್ಬಮ್ಮನು ತನ್ನ ಬೀಗತಿಯು ಅಷ್ಟೊಂದು ಬಡವಳಾಗಿಬಿಟ್ಟಿರುವಳೆಂಬುದನ್ನು
ನಂಬಲಾರದೇ ಹೋದಳು. ಮದುವೆಯಲ್ಲಿ ಅಳಿಯನಿಗೆ ಒದಿಸುತ್ತೇನೆಂದು
ಮಾತುಕೊಟ್ಟಿದ್ದ ಆ ವಜ್ರದ ಉಂಗುರವನ್ನೂ, ಚಿನ್ನದ ಉಡಿದಾರವನ್ನೂ
(ಕೊನೆಯಪಕ್ಷ ೨೫ ಸವರನ್ನಿನದನ್ನಾದರೂ ಮಾಡಿಸಿ) ತಂದುಕೊಟ್ಟು ವಿನಹ
ಸೊಸೆಯನ್ನು ಮನೆಗೆ ಖಂಡಿತ ಕರೆಸಿಕೊಳ್ಳಲಾಗುವುದಿಲ್ಲ ಎಂದು ಉತ್ತರ
ಬರೆದುಬಿಟ್ಟಳು. ಯುದ್ಧ ಬೇರೆ ಪ್ರಾರಂಭವಾಗಿಬಿಟ್ಟಿದೆ. ಚಿನ್ನದ ಬೆಲೆಯೂ
ವಜ್ರದ ಬೆಲೆಯೂ ದಿನ ದಿನಕ್ಕೂ ವಿಷ ಏರುವಂತೆ ಏರುತ್ತಲೇ ಇದೆ.
ಅನ್ನ ಬಟ್ಟೆಗೇ ತೊಂದರೆಪಡುತ್ತಲಿರುವ ಬೀಗತಿಯು ವಜ್ರದ ಉಂಗುರವನ್ನೂ
ಚಿನ್ನದ ಉಡಿದಾರವನ್ನೂ ಹೇಗೆ ಒದಗಿಸಬಲ್ಲಳು ಪಾಪ! ಸುಬ್ಬಮ್ಮನಿಗೆ
ಯಾವಾಗಲೂ ಸ್ವಲ್ಪ ದುರಾಶೆ ಅಧಿಕ. ತನ್ನ ಸೊಸೆ ಅಷ್ಟು ತಂದಳು,
ಇಷ್ಟು ತಂದಳು ಎಂದು ನೆರೆಹೊರೆಯವರೊಡನೆ ಜಂಭಕೊಚ್ಚಿಕೊಳ್ಳಬೇಕ
ಲ್ಲವೇ? ಈ ಹಣ ಪಿಶಾಚಿಯು ಆ ಹುಡುಗಿಯನ್ನು ಗಂಡನಿಂದ ದೂರ
ಹೊರದೂಡಿಬಿಟ್ಟಿತು. ಸರಸ್ವತಿಯ ಅದೃಷ್ಟವಂತೂ ಈ ರೀತಿಯಾಯಿತು.
ಆದರೆ ರಾಮುವಂತೂ ತಾಯ ಈ ದುರ್ವರ್ತನೆಯನ್ನು ಕಂಡು ಬಹಳವಾಗಿ
ನೊಂದನು. ಆದರೆ ಅವನಿಗೆ ಮಾತೆಯೆಂದರೆ ದೇವತಾ ಸ್ವರೂಪ. ಅವಳ
ಮಾತು ಮೀರಿ ನಡೆಯಲು ಅಶಕ್ತನಾಗಿದ್ದನು ತಾಯಿಗೆ ಅದೆಷ್ಟೋ ರೀತಿಯಾಗಿ
ಹೇಳಿ ನೋಡಿದನು. ಆದರವಳು ಹಿಡಿದದ್ದೇ ಹಠ, ತಾಯಿಯ ಇಷ್ಟಕ್ಕೆ ವಿರು
ದ್ಧವಾಗಿ ನಡೆಯಲೂ ಸಹ ಅವನ ಮನಸ್ಸು ಅವಕಾಶ ಕೊಡಲಿಲ್ಲ. ಸರಸ್ವ
ತಿಗೆ ಮಾತ್ರ ರಹಸ್ಯವಾಗಿ ಪದೇ ಪದೇ ಪತ್ರ ಬರೆದು ಅವಳಿಗೆ ಧೈರ್ಯ
ಹೇಳಿ, ಸಮಾಧಾನಪಡಿಸುವನು. ಅವನ ಪಾಡಂತೂ ಬಹಳ ಪೇಚಾಟಕ್ಕೆ
ಬಂದಿತು. ಮಗನು ದಿನ ದಿನಕ್ಕೆ ಚಿಂತೆಯಿಂದ ಬಾಡಿ ಬತ್ತಿ ಹೋಗುತ್ತಿರು
ವುದನ್ನು ಕಂಡು ಮಾತೆಯು ಅವನಿಗೆ ಪುನರ್ವಿವಾಹ ಮಾಡಲು ಆಲೋಚನೆ

ತೆಗೆದಳು. ಇದನ್ನೇ ಕಾಗ ಕಾಯುತ್ತ ಪೆಟ್ಟಿಂದ ನಾಗರ ಹಾವಿನಂತೆ ಬುಸುಗುಟ್ಟುವುದನ್ನು ಕಂಡು ಸುಬ್ಬಮ್ಮನು ನಡು ನಡುಗಿ ಹೋದಳು.

ಸುಬ್ಬಮ್ಮನಿಗಾದರೋ ಸಾಯುವುದರೊಳಗಾಗಿ ಮನೆ ತುಂಬ ಮೊಮ್ಮಕ್ಕಳನ್ನು ಕಂಡಾನಂದಿಸಿಬಿಡಬೇಕೆಂದು ಬಹಳ ಆಸೆ. ಪದೇ ಪದೇ ಇದನ್ನೇ ಜಪಿಸುವಳು. ಅದೇ ಮತ್ತೆ! ಆ ದಿನಕ್ಕೆ ಹಿಂದಿನ ದಿನ ಅವರ ಮನೆಗೆ ಪಕ್ಕದ ಮನೆಗೆ ಅದೇತಾನೆ ಶಿವಮೊಗ್ಗೆಯಿಂದ ಬೆಂಗಳೂರಿಗೆ ವರ್ಗವಾಗಿ ಬಂದ ರಾಮುವಿನ ಗೆಳೆಯ ಅಸಿಸ್ಟೆಂಟ್ ಇಂಜಿನಿಯರ್ ಕೇಶವ ಮೂರ್ತಿಯು ಒಕ್ಕಲು ಬರಲು, ಅವನ ಪುತ್ರಿ ಮಾಲತಿಯನ್ನು ರಾಮು ಕರೆತಂದು "ಅಮ್ಮಾ ಅಮ್ಮಾ, ಇಕೋ ನಿನಗೊಂದು ಮೊಮ್ಮಗಳು ಬಂದಿದ್ದಾಳೆ" ಎಂದದ್ದು. ಹೌದು, ಅಂದಿನಿಂದ ಮಗು ಮಾಲತಿಯು ಸುಬ್ಬಮ್ಮನಿಗೆ ಸಾಕ್ಷಾತ್ ಮೊಮ್ಮಗಳಾಗಿಯೇ ಪರಿಣಮಿಸಿದಳು.

* * * *

ಮರುದಿನ ಬೆಳಿಗ್ಗೆ ಕಾಫೀ ಕುಡಿಯುವಾಗ ಕೇಶವನು ಮಾಲತಿಯನ್ನು ಕರೆದನು ಆದರೆ ಅವಳು ಬರಲಿಲ್ಲ. ಅವನಿಗೆ ಕಾಫೀ ಕುಡಿಯುವಾಗ ಅವನ ಮಗು ಹತ್ತಿರ ಬಂದು ತೊದಲ್ನುಡಿಗಳನ್ನು ಸುರಿಸುತ್ತಾ ಅವನ ಕಾಫಿಯನ್ನು ಹಂಚಿಕೊಳ್ಳದಿದ್ದಲ್ಲಿ ಕಾಫೀ ರುಚಿಸದು. ಕಮಲೆಯೂ ಸಹ ಮನೆಯೆಲ್ಲಾ ಹುಡುಕಿ ನೋಡಿದಳು. ಮಗುವನ್ನು ಕಾಣಲಿಲ್ಲ. ತೋಟದಲ್ಲೇನಾದರೂ ಆಡುತ್ತಿರುವಳೇನೋ ಎಂದು ಕೇಶವನೂ ತೋಟಕ್ಕೆ ತೆರಳಿದನು, ಬಳಿಕ ಹಿತ್ತಲಲ್ಲಿ ಮುಸುರೆಯ ಪಾತ್ರೆ ತೊಳೆಯುತ್ತಲಿದ್ದ ಚಿಕ್ಕಿಯು ಮಗುವು ಪಕ್ಕದ ಮನೆಗೆ ಹೋದಳೆಂದು ತಿಳಿಸಿದಳು. ಅವಳನ್ನು ಕರೆತರುವುದಕ್ಕಾಗಿ ಕೇಶವನು ರಾಮುವಿನ ಮನೆಗೆ ಬಂದನು. ಊಟದ ಮನೆಯಲ್ಲಿ ರಾಮುವೂ ಮಾಲತಿಯೂ ಮಣೆಯ ಮೇಲೆ ಕುಳಿತು ಕಾಫೀ ಫಲಹಾರ ತೆಗೆದುಕೊಳುತ್ತಲಿದ್ದರು. ಸುಬ್ಬಮ್ಮನು ಬಡಿಸುತ್ತಲಿದ್ದಳು. 'ಲೇ ತುಂಟೀ! ಮನೆಯೆಲ್ಲಾ ಹುಡುಕಿ ಹುಡುಕಿ ಸಾಕಾಯಿತು. ಹೇಳದೇ ಕೇಳದೇ ಇಲ್ಲಿಗೆ ಯಾವಾಗ ಓಡಿ ಬಂದೆಯೇ?' ಎಂದು ಕೇಶವನು ಮಗುವಿನ ಮೇಲೆ ಮೃದುವಾಗಿರೇಗಿದನು.

ಅಷ್ಟರೊಳಗಾಗಿ ಸುಬ್ಬಮ್ಮನು "ನಾನೇ ಮತ್ತೆ ಕರೆತಂದೆ. ಅವಳ ಮೇಲೇಕೆ ಕೋಪ ಮಾಡುತ್ತೀರಿ? ಬೇಲಿಯ ಹತ್ತಿರವಿದ್ದ ಪಾರಿಜಾತದ

ಗಿಡದಲ್ಲಿ ಪೂಜೆಗಾಗಿ ಹೂ ಕೊಯ್ಯುತ್ತಲಿದ್ದೆ. ಆಗ ಬೇಲಿಯಾಚೆ ಮಗು ಆಡುತ್ತಲಿದ್ದಳು, ಕರೆತಂದೆ ಅಷ್ಟೇ. ನೀನು ದೋಸೆ ತಿನ್ನಮ್ಮ ಚಿನ್ನಾ ಇನ್ನೊಂದು ಹಾಕಲೇ ?" ಎಂದು ಮಗುವನ್ನು ಮುದ್ದಾಡಲಾರಂಭಿಸಿದಳು.

"ಅಮ್ಮಾ ಇವನಿಗೊಂದು ಹಲಗೆ ಹಾಕೆ. ಬಾರೋ ಕೇಶವ್, ನೀನೂ ಸ್ವಲ್ಪ ಕಾಫೀ ತೆಗೆದುಕೊಳ್ಳುವೆಯಂತೆ."

"ಇಲ್ಲ, ಥ್ಯಾಂಕ್ಸ್, ಬೇಡಪ್ಪಾ ಮನೆಯಲ್ಲಿ ಕಾಫೀ ಆರುತ್ತಲಿದೆ. ಕಾಫೀ ಕುಡಿಯುವಾಗ ನಮ್ಮ ಮಾಲತಿ ಪಕ್ಕದಲ್ಲಿಲ್ಲದಿದ್ದರೆ ರುಚಿಸೋದೇ ಇಲ್ಲ—ಅದಕ್ಕೇ ಮತ್ತೆ ಅವಳನ್ನು ಕರೆದುಕೊಂಡು ಹೋಗಲು ಬಂದೆ ?"

"ಪರವಾಗಿಲ್ಲ. ಮನೆಯಲ್ಲಿ ಎರಡನೇ ಡೋಸ್ ಬಿಟ್ಟರಾಯಿತು. ಬಾ, ಬಾ, ಕುಳಿತುಕೊ. ಅಮ್ಮಾ ಇವನಿಗೆರಡು ಬಿಸಿ ಬಿಸೀ ದೋಸೆ."

"ಮಾವ, ನೀನು ಈವತ್ತೇ ಹೋಗಿ ಮಾಮಿಯನ್ನು ಕರೆತಂದು ಬಿಡಿ. ಪಾಪಾ ಅಜ್ಜಿಯು ಕೈಯಲ್ಲೇ ಎಲ್ಲ ಕೆಲಸವನ್ನೂ ಮಾಡಿಸುತ್ತೀಯಲ್ಲಾ. ಮಾಮಿ ಬಂದರೆ ದೋಸೆ ಕಾಫೀ ಎಲ್ಲವನ್ನೂ ನಿನಗೆ ರುಚಿ ರುಚಿಯಾಗಿ ಮಾಡಿಕೊಡುತ್ತಾಳೆ. ಆಗ, ಅಜ್ಜಿ ಸುಮ್ಮನೆ ನನ್ನ ಹತ್ತಿರಲೇ ಕುಳಿತಿರುತ್ತಾಳೆ. ಒಳ್ಳೊಳ್ಳೇ ಕಥೇ ಹೇಳುತ್ತಾಳೆ." ಎಂದು ಮಾಲತಿ ಮಾತಿಗೆ ಪ್ರಾರಂಭಿಸಿಬಿಟ್ಟಳು.

ಕೇಶವನಿಗಂತೂ ರಾಮುವಿನ ಮನೆಯ ವಿಷಯವೆಲ್ಲವೂ ತಿಳಿದಿತ್ತು. 'ಇದೇನಪ್ಪಾ ಇದು. ಈ ಹುಡುಗಿ ಏನೇನೋ ಅನ್ನಲು ಶುರುಮಾಡಿಬಿಟ್ಟಳು" ಎಂದು ಹೆದರಿ, "ಮಾಲೂ !" ನೀನು ಕಾಫೀ (ಕುಡಿದಾಯಿತಲ್ಲಾ.) ಅಮ್ಮ ಕರೆಯುತ್ತಾಳೆ ಹೋಗು, ನಾನು ಇಕೋ ಬಂದೆ' ಎಂದು ಮಾತು ಬದಲಾಯಿಸಿದನು.

ಸುಬ್ಬಮ್ಮನು "ಮಗುವನ್ನೇಕೆ ಅಟ್ಟುಸುತ್ತೀರಿ ? ನೀನು ಸುಮ್ಮನೆ ಕೂರಮ್ಮಾ ಚಿನ್ನಾ ಇನ್ನೊಂದು ಪುಟಾಣಿದೋಸೆ ಹಾಕಲೇ ?" ಎಂದಳು.

ಕೇಶವನು ಕಿಂಕರ್ತವ್ಯ ಮೂಢನಾಗಿ ತೆಪ್ಪಗಾದನು. ಕಾಫೀ ಗೀಫೀ ಎಲ್ಲ ಮುಗಿದ ಬಳಿಕ ಎಲ್ಲರೂ ನಡುಮನೆಯಲ್ಲಿ ಬಂದು ಕುಳಿತರು. ಸುಬ್ಬ

ಮ್ಮನೂ ಸಹ ತರಕಾರೀ ಮತ್ತು ಈಳಿಗೆಯ ಮಣೆಯು ; ಹಿತವಾಗಿ ಒಂದು ಕಡೆ ಬಂದು ಕುಳಿತಳು. ಆಗ ಅಗಸರವನು ಮಡಿ ಬಟ್ಟೆ ತರಲು, ರಾಮುವು ಲೆಕ್ಕ ನೋಡಿ ತೆಗೆದುಕೊಂಡು ಬೀರುವಿನಲ್ಲಿ ವಿಂಗಡಿಸಿಡಲು ತೊಡಗಿದನು. ಕೇಶವನೂ ಅವನಿಗೆ ಸಹಾಯಕನಾದನು. ಇದನ್ನೆಲ್ಲ ಗಮನಿಸಿದ ಪುಟ್ಟ ಮಾಲತಿಯು "ಮಾವ ನೀವೇ ಇದನ್ನೆಲ್ಲ ತೆಗೆದಿಡುವಿರೇಕೆ?" ಎಂದು ರಾಮುವನ್ನು ಪ್ರಶ್ನಿಸಿದಳು.

"ರಾಮು—ಯಾಕಮ್ಮಾ, ನಾನು ಇದೆಲ್ಲ ಮಾಡಬಾರದೇನು ?"

"ಮಾಲ— ನಮ್ಮನೇಲಿ ನಮ್ಮಮ್ಮನೇ ಮತ್ತೆ ಇದೆಲ್ಲ ಮಾಡೋದು. ಅಪ್ಪನಿಗೆ ಆಫೀಸುರೂಮಿನಲ್ಲಿ ಕುಳಿತು ಪೇಪರ್ ಓದುವುದೊಂದೇ ಗೊತ್ತಿದೆ" ಎನಲು, ಎಲ್ಲರೂ ಗೊಳ್ಳನೆ ನಕ್ಕರು. ಮಾಲತಿಯು ಅಂದ ಮಾತು ಸುಬ್ಬಮ್ಮನ ಹೃದಯವನ್ನು ಹೊಕ್ಕಿತು.

ಅಷ್ಟರಲ್ಲೇ ಮಾಲತಿಯ ದೃಷ್ಟಿಯು ರಾಮೂವಿನ ಮೇಜಿನ ಮೇಲೆ ಬಿದ್ದಿತು. "ಮಾವಾ, ಮಾವಾ ನಿಮ್ಮ ಮೇಜಿಗೇಕೆ "ಟೇಬಲ್‌ಕ್ಲಾತ್" ಹಾಸಿಲ್ಲ" ಎಂದು ಮತ್ತೊಂದು ಪ್ರಶ್ನೆ ಹಾಕಿದಳು.

"ಹಾಸಲು ನಮ್ಮನೇಲಿ ಮಾಮಿ ಇಲ್ಲವಲ್ಲವಮ್ಮಾ"

" ಅಜ್ಜೀ ನಮ್ಮಪ್ಪನ "ಟೇಬಲ್‌ಕ್ಲಾತಿ"ಗೆ ಬಣ್ಣ ಬಣ್ಣದ ದಾರದಿಂದ ಅದೆಷ್ಟೊಂದು ಚೆನ್ನಾಗಿ ಕಸೂತಿ ಕೆಲಸಮಾಡಿದ್ದಾಳೆ ಗೊತ್ತುಂಟೇ ? ನಮ್ಮಮ್ಮನೇ ಬಾಗಿಲಿಗೆಲ್ಲಾ ಮಣಿಗಳನ್ನು ಪೋಣಿಸಿ ಕಟ್ಟಿದ್ದಾಳೆ ? ಬಹಳ ಜೋರಾಗಿದೆ ಮಾವ. ನಿಮ್ಮ ಮನೇ ಮಾಮೀಗೆ ಮಣಿ ಪೋಣಿಸಲು ಬರುತ್ತದೆಯೇ ಮಾವಾ ?"

"ನನಗೆ ಗೊತ್ತಿಲ್ಲವಮ್ಮಾ"

"ನೀನು ಹೋಗಿ ಮಾಮಿಯನ್ನು ಕರೆತಂದುಬಿಡು. ಮಾಮಿಗೆ ಬಾರದಿದ್ದರೆ ನಮ್ಮಮ್ಮ ಎಲ್ಲವನ್ನೂ ಕಲಿಸಿಬಿಡುತ್ತಾಳೆ. ಮಾಮೀ ಬಂದುಬಿಟ್ಟರೆ ಅಜ್ಜಿಗೂ ಕೆಲಸ ಕಡಿಮೆಯಾಗುತ್ತದೆ ಅಲ್ಲವೇ ಅಜ್ಜಿ ?"

ಕೇಶವಮೂರ್ತಿಯು ಮಾತು ಬದಲಾಯಿಸುವುದಕ್ಕಾಗಿ "ಮಾಲೂ, ನಿನ್ನಪ್ಪನಿಂದ ನಿನ್ನೆ ಕಾಗದ ಬಂತಲ್ಲಾ ! ನಿನಗೆ ಗೊತ್ತೇ ?" ಎಂದನು.

ಮಾಲತಿ! 'ಓಹೋ, ಗೊತ್ತು ಗೊತ್ತು, ಅಜ್ಜೀ! ನಮ್ಮಜ್ಜೀ ಅಪ್ಪನಿಷ್ಟು ಒಳ್ಳೆಯವರು ಗೊತ್ತೇ! ಊರಿಂದ ಬರುವಾಗ ನನಗೆ ಬೊಂಬೆ, ಪೀಪಿ, ಹೊಸ ಲಂಗಾ ಎಲ್ಲ ತರುತ್ತೇನೆಂದು ಬರೆದಿದ್ದಾರೆ! ಮತ್ತೆ— ನಮ್ಮ ಅಮ್ಮನಿಗೆ ಹೊಸದಾಗಿ ಒಂದು ಜೊತೆ ಚಿನ್ನದ ಬಳೇ ಬೇರೆ ಮಾಡಿಸಿಟ್ಟಿದ್ದಾರಂತೆ, ಬಹಳ ಚೆನ್ನಾಗಿದೆಯಂತೆ........'' ಎಂದು ಸುಬ್ಬಮ್ಮನ ಹತ್ತಿರ ಜಂಭ ಕೊಚ್ಚಿಕೊಳ್ಳಲು ಪ್ರಾರಂಭಿಸಿಬಿಟ್ಟಳು.

ಸರಿ, ಈ ಹುಡುಗಿಯನ್ನು ಇನ್ನು ಮೇಲೆ ಇವರ ಮನೆಗೆ ಕಳುಹಿಸುವುದು ಸರಿಯಲ್ಲವೆಂದುಕೊಂಡು ಕೇಶವಮೂರ್ತಿಯು ರಾಮುವಿನ ಹತ್ತಿರ ಅಪ್ಪಣೆ ಪಡೆದುಕೊಂಡು ಮಾಲತಿಯೊಡನೆ ಮನೆಗೆ ತೆರಳಿದನು. ತಾನು ಕಚೇರಿಗೆ ಹೋಗುವಾಗ ಕಮಲೆಯ ವಿಷಯವೆಲ್ಲವನ್ನೂ ವಿಶದವಾಗಿ ತಿಳಿಸಿ, ಮಾಲತಿಯನ್ನು ರಾಮುವಿನ ಮನೆಗೆ ಹೋಗಗೊಡಿಸಬೇಡವೆಂದು ಹೇಳಿ ಹೋದನು.

* * * *

ಅಂದು ಪೂರ್ತಿಯೂ ಪುಟ್ಟ ಮಾಲತಿಯನ್ನು ನೋಡದೆ, ಅವಳ [illegible] ತೊದಲ್ನುಡಿಗಳನ್ನು ಕೇಳದೆ ಸುಬ್ಬಮ್ಮನಿಗೆ ಬಹಳ ಬೇಸರವಾಯಿತು. ಮರುದಿನ ಬೆಳಗ್ಗೆಯೇ ಪಕ್ಕದ ಮನೆಗೆ ಹೋದಳು. [illegible] ಹೊತ್ತಿನಲ್ಲಿ ಹೀಗೆ ಸುಬ್ಬಮ್ಮನ ಆಗಮನವನ್ನು ಕಂಡು ಕಮಲೆಗೆ ಆಶ್ಚರ್ಯವಾಯಿತು.

"[illegible]ನಮ್ಮಾ, ಮಗುವನ್ನು ನೋಡದೆ, ನನ್ನಿಂದಿರಲು ಸಾಧ್ಯವಿಲ್ಲ. [illegible]?" ಎಂದಳು ಸುಬ್ಬಮ್ಮ. ಆಕೆಯ ಧ್ವನಿ ಕೇಳಿದೊಡನೆಯೇ ಕೈಯಲ್ಲಿದ್ದ ತಿಂಡಿ ತಟ್ಟೆಯನ್ನು ಅಲ್ಲಿಯೇ ಬಿಸುಟು "ಅಜ್ಜಿ! ಅಜ್ಜಿ" ಎಂದು ಮಾಲತಿಯು ಮನೆಯಿಂದ ಓಡಿಬಂದು ಆಕೆಯನ್ನು ತಬ್ಬಿಕೊಂಡಳು [illegible]

ಕಮಲೆಯು "ಶೀ ತುಂಟಿ, ಹೀಗೆ ಅಜ್ಜಿಯನ್ನು ಮುಟ್ಟುವುದೇ? ಇನ್ನೂ ಸ್ನಾನ ಮಾಡಿಲ್ಲವೇನೇ?" "ಪರವಾಗಿಲ್ಲ ಕಮಲಮ್ಮಾ, ನನ್ನ ಚಿನ್ನಾ [illegible]ಗ? ಯಾಕೆ ನಿನ್ನೆ ಬರಲಿಲ್ಲ ಕಂದಾ?" ಎಂದು ಸುಬ್ಬಮ್ಮನು ಮಗುವನ್ನೆತ್ತಿ ಮುದ್ದಿಟ್ಟಳು.

"ನೋಡಜ್ಜಿ, ಮತ್ತೆ............ಮತ್ತೆ............ಅಮ್ಮನೂ, ಅಪ್ಪನೂ ನಾನು ನಿಮ್ಮನೆಗೆ ಬಂದರೆ ನನ್ನನ್ನು ರೂಮಿನೊಳಗೆ ಕೂಡಿಹಾಕುತ್ತೇನೆಂದು ಬೈದರು. ಅದಕ್ಕೇ ಮತ್ತೆ ನಾ ಬರಲಿಲ್ಲ. ಇಲ್ಲೇ ಆಡಿಕೊಂಡಿದ್ದೆ........"

"ನಿಮ್ಮನ್ನು ಬಂದು ಸುಮ್ಮನೆ ತೊಂದರೆಪಡಿಸುತ್ತಾಳೆಂದು ಹಾಗಂದೆವು, ಅಷ್ಟೇ."

"ನನ್ನ ಕಂದನ್ನ ಹಾಗೆಲ್ಲಾ ಗದರಿಸಬೇಡಿ. ಅವಳಿಲ್ಲದ ಮನೆಯೊಂದು ಮನೆಯೇ. ಬಾ ಚಿನ್ನ, ನನ್ನ ರಾಜ, ನನ್ನ ಅರಗಿಣಿ! "—ಏ—" ಎಂದು ಮುದ್ದಿಡುತ್ತಾ ಮಗುವಿನ ಸಹಿತ ಮನೆಗೆ ಹಿಂತಿರುಗಿದಳು ಅಜ್ಜಿ.

ಈ ರೀತಿಯಾಗಿ ಸುಬ್ಬಮ್ಮನ ಮತ್ತು ಮಾಲತಿಯ ನಡುವೆ ಪ್ರೇಮವು ದಿನೇ ದಿನೇ ವೃದ್ಧಿಯಾಗುತ್ತಲಿದ್ದಿತು. ಮಾಲತಿಯು ದಿನದಲ್ಲಿ ಬಹುಭಾಗವನ್ನು ರಾಮುವಿನ ಮನೆಯಲ್ಲೇ ಕಳೆಯುತ್ತಿದ್ದಳು. ಸುಬ್ಬಮ್ಮನು ಮಗುವಿಗೆ ವಿವಿಧ ಭಕ್ಷ್ಯ ಭೋಜ್ಯಗಳನ್ನು ಮಾಡಿಕೊಡುವಳು, ದಿನಕ್ಕೊಂದು ರೀತಿಯಲ್ಲಿ ಜಡೆಹೆಣೆದು, ತಿಲಕವಿಟ್ಟು, ಹೂ ಮುಡಿಸಿ ಅಲಂಕರಿಸಿ ಆನಂದಿಸುವಳು. ಮಾಲತಿಯನ್ನು ಜೊತೆಗೆ ಕರೆದುಕೊಳ್ಳದೆ ಆಚೆಯೆಲ್ಲೂ ಹೋಗಳು. ಪ್ರತಿ ನಿತ್ಯವೂ ಮಾಲತಿಗಾಗಿ ರಾಮು ಏನಾದರೊಂದು ಅಪೂರ್ವ ವಸ್ತು ಕೊಂಡು ತರಬೇಕು. ಯಾಕೆ ತರಲಿಲ್ಲವೆಂದು ಪ್ರಶ್ನಿಸದಿರಳು. ತನಗೂ ಇಂತಹದೊಂದು ಮುದ್ದು ಮೊಮ್ಮಗು ಇಲ್ಲವಲ್ಲಾ ಎಂದು ಕೊರಗುವಳು. ಕೆಲಸಮಯ ಅನ್ಯಾಯವಾಗಿ ಆ ಎರಡು ಅನಿಷ್ಟ ಒಡವೆಗಾಗಿ ಆ ಅರಿಯದ ಹುಡುಗಿಯನ್ನು ಗಂಡನಿಂದ ದೂರಮಾಡಿರುವೆನಲ್ಲಾ ಎಂದು ತೋರುವುದು, ಮರುಕ್ಷಣ ಬೀಗತಿಯ ಮೇಲೆ ಮಿತಿಯಿಲ್ಲದ ಕೋಪ ಉಂಟಾಗುವುದು. ಬರುವ ನವರಾತ್ರಿಗಾದರೂ ಸೊಸೆಯನ್ನು ಕರೆಸಿಬಿಡಬೇಕೆಂದು ಮೆಲ್ಲಗೆ ಆಸೆಮೂಡುವುದು............ಮಾತೆಯ ಹೃದಯ ಪರಿವರ್ತನೆಯನ್ನು ಕಂಡು ರಾಮುವು ಮನದೊಳಗೆ ಹಿಗ್ಗಲಾರಂಭಿಸಿದನು. ಆಗ ಮನದೊಳಗೆಯೇ ಪುಟ್ಟ ಮಾಲತಿಗೆ ಕೃತಜ್ಞತೆಯನ್ನರ್ಪಿಸಿದನು.

* * * *

ಅಂದು ಭಾನುವಾರ. ಹಗಲು ಭೋಜನವನ್ನು ಮುಗಿಸಿಕೊಂಡು ರಾಮು ಆಫೀಸು ರೂಮಲ್ಲಿ 'ಫೈಲ್' ನೋಡುತ್ತಲಿದ್ದನು. ಅವನ ತಾಯಿಯು

ಕಿಟಕಿಯ ಸಮೀಪದಲ್ಲಿದ್ದ ಬೆಂಚೊಂದರ ಮೇಲೆ ಕುಳಿತು ಪಕ್ಕದ ಮನೆಯನ್ನು ಈಕ್ಷಿಸುತ್ತಲಿದ್ದಳು. ಪಕ್ಕದ ಮನೆಗೆ ಲೇಡೀ ಡಾಕ್ಟರೂ, ಮಿಡ್ವೈಫೂ ಬಂದುಬಿಟ್ಟರು. ಪ್ರಸವ ವೇದನೆಯನ್ನು ತಡೆಯಲಾರದೆ ಕಮಲೆಯು ಕಿರಿಚುವ ಧ್ವನಿಯು ಕೇಳಿಬರುತ್ತಲಿದ್ದಿತು. "ಕಮಲೆಯು ದೇವರ ದಯೆಯಿಂದ ಪ್ರಸವಿಸಿ ಸೌಖ್ಯಹೊಂದಬೇಕಲ್ಲಾ" ಎಂದು ಸುಬ್ಬಮ್ಮನಿಗೂ ಯೋಚನೆ ಹತ್ತಿತು. ಮಾಲತಿಯ ಅಜ್ಜಿಯು ಮನೆಯೊಳಕ್ಕೂ, ಹೊರಗೂ ಅಲೆದಾಡುತ್ತಲಿದ್ದಳು. ಕೇಶವಮೂರ್ತಿಯೂ ಚಿಂತೆಯೇ ಮೂರ್ತಿವತ್ತಾಗಿ ಬೀದಿ ವರಾಂಡದಲ್ಲಿ ಮಾಲತಿಯೊಡನೆ ಕುಳಿತಿದ್ದನು. ಸ್ವಲ್ಪ ಹೊತ್ತಿನಲ್ಲಿ ಕಮಲೆಯ ಕೂಗು ನಿಂತಿತು. "ಕುವ್ಹಾ, ಕುವ್ಹಾ" ಎಳೆಗೂಸಿನ ಅಳುದನಿ ಕೇಳಬಂದಿತು.

ಸುಬ್ಬಮ್ಮನಿಗೆ ಮನೆಯಲ್ಲಿರಲಾಗಲಿಲ್ಲ. ಮೆಲ್ಲಗೆ ಪಕ್ಕದಮನೆಗೆ ಹೊರಟಳು. ಅಷ್ಟು ಹೊತ್ತಿಗೆ ಲೇಡೀ ಡಾಕ್ಟರ್, ನರ್ಸ್ ಎಲ್ಲರೂ ಕೆಲಸ ಮುಗಿಸಿಕೊಂಡು ಹೊರಟು ಹೋಗಿದ್ದರು. ಶಾರದಮ್ಮನವರೇ ಸೊಸೆಯ ಹತ್ತಿರವಿದ್ದರು, ಮಾಲತಿಯು ಸುಬ್ಬಮ್ಮನನ್ನು ಪುಟ್ಟ ಪಾಪ ತೋರಿಸಲು ಎಳೆದುಕೊಂಡು ಹೋದಳು.

ಶಾರದಮ್ಮನು ಪುಟ್ಟ ಮೊಮ್ಮಗುವನ್ನು ತೆಗೆದು ತೋರಿಸುತ್ತಾ "ನೋಡೀಂದ್ರೆ," ನಮ್ಮ ಮಾಲತಿಗೆ ತಮ್ಮ ಹುಟ್ಟಿಬಿಟ್ಟ! ಪಾಪ ಮಗು (ಕಮಲೆ) ಬಹಳ ಶ್ರಮಪಟ್ಟಳು. ಕೊನೆಗೆ ದೇವರು ಒಳ್ಳೆಯದು ಮಾಡಿದ ಸಧ್ಯಕ್ಕೆ" ಎಂದು ಬಹಳ ಮಮತೆಯೊಡನೆ ನುಡಿಯಲು, ಸುಬ್ಬಮ್ಮನ ಕರುಳಲ್ಲಿ ಅದೊಂದು ತರಹದ ವೇದನೆ ಮೂಡಿತು.

ಸುಬ್ಬಮ್ಮನು ಮಾಲತಿಯನ್ನು ಕುರಿತು "ಪುಟ್ಟ ಪಾಪನನ್ನು ನಮ್ಮನೆಗೆ ಕೊಟ್ಬುಬಿಡು ಚಿನ್ನಾ" ಎಂದು ತಮಾಷೆಗೆಂದಳು. ಮಾಲತಿಯು ಗಂಟು ಮುಖ ಮಾಡಿಕೊಂಡು "ಊಂ ........ ನಾನು ಕೊಡೋಲ್ಲ........ ನಮ್ಮನೇಗೆ ಬೇಕು" "ನಿಮ್ಮನೇ ಮಾಮೀಗೆ ಹುಟ್ಟಿದರೆ ನಿಮ್ಮನೇಲೇ ಇರುತ್ತೆ ಆ ಪಾಪ" ಎಂದಳು. "ಲೇ ಸಿಕ್ಕಾಪಟ್ಟೆ ಮಾತಾಡಬಾರದು" ಎಂದು ಶಾರದಮ್ಮನು ಮೊಮ್ಮಗಳನ್ನು ಗದರಿಸಿಕೊಂಡಳು. ಅಷ್ಟರ ಮೇಲೆ ಸುಬ್ಬಮ್ಮನಿಗೆ ಅಲ್ಲಿ ನಿಲ್ಲಲಾಗಲಿಲ್ಲ.

* * * *

ಕೈಯಲ್ಲಿದ್ದ ಕಲ್ಲುಸಕ್ಕರೆಯನ್ನು ಮೇಜಿನ ಮೇಲಿಟ್ಟು "ರಾಮೂ, ಲೋ ರಾಮೂ! ಮಾಲತಿಗೆ ತಮ್ಮ ಹುಟ್ಟಿದ್ದಾನೆ!" ಎಂದಳು ಸುಬ್ಬಮ್ಮ. ಕೆಲಸದಲ್ಲಿ ತಲ್ಲೀನನಾಗಿದ್ದ ರಾಮುವು "ಊಂ" ಅಂದನಷ್ಟೇ. ತಾಯಿಯು ಐದು ನಿಮಿಷ ನಿಂತಲ್ಲಿಯೇ ನಿಂತಳು. ಬಳಿಕ "ರಾಮೂ, ಸಂಕ್ರಾಂತಿಗೆ ಇನ್ನೂ ಹದಿನೈದು ದಿನ ಮಾತ್ರವಿದೆ. ಎರಡು ದಿನ ರಜ ತೆಗೆದುಕೊಂಡು ಕೊಯಮತ್ತೂರಿಗೆ ಹೋಗಿ ಸರಸಳನ್ನು ಕರೆತಂದುಬಿಡೋಣ, [illegible]!" ಅಂದಳು!

ರಾಮು ಆಶ್ಚರ್ಯಚಕಿತನಾಗಿ ತಲೆಯೆತ್ತಿ ತಾಯಿಯನ್ನೇ ನೋಡಿದನು.

ಆದರೆ ಮುಂದಿನ ವರ್ಷ ಸುಬ್ಬಮ್ಮನಿಗೂ ಮೊಮ್ಮಗನು ಹುಟ್ಟಿ, ಅಜ್ಜಿಯ ಬಯಕೆಯನ್ನು ಪೂರ್ಣಗೊಳಿಸಿದನೆಂದು ಹೇಳಬೇಕಾಗಿಲ್ಲ [illegible].

---

# ನಾದಿನಿ ಬರುತ್ತಾಳೆ

ಬೆಂಗಳೂರು

೧೬—೧೨..........

ಕ್ಷೇಮ,

ಪ್ರೀತಿಯ ಅತ್ತಿಗೆಗೆ ಅನೇಕ ನಮಸ್ಕಾರಗಳು. ನಿಮ್ಮನ್ನೆಲ್ಲ ಬಂದು ನೋಡಿ ಎರಡು ವರ್ಷವಾಯಿತು. ಈ ಸಲವಾದರೂ ಅಲ್ಲಿಗೆ ಬಂದು, ನಿಮ್ಮನ್ನೆಲ್ಲ ನೋಡಿ ಬರಬೇಕೆಂದು ನನಗೆ ಆಸೆಯಾಗಿದೆ. ಕಳೆದ ಸಲವೇ ಹೊರಟೆ. ನನ್ನ ನಾದಿನಿ ಲಕ್ಷ್ಮಿ ಬಂದುಬಿಟ್ಟಳಲ್ಲಾ, ಸೈನ್ಯದೊಡನೆ ( ಮಕ್ಕಳು ) ಅಬ್ಬಬ್ಬಾ! ನನಗೆ ಸಾಕು ಸಾಕಾಯಿತು ಅವರುಗಳನ್ನು ಉಪಚರಿಸಿ, ಸುಧಾರಿಸುವುದರೊಳಗಾಗಿ ಈ ಕ್ರಿಸ್ಮಸ್ ರಜಕ್ಕೂ ಬಂದರೂ ಬಂದೆ ಎಂದು ಹೇಳಿ ಹೋಗಿದ್ದಾಳೆ. ಎಲ್ಲಾದರೂ ಹಠಾತ್ತನೆ ಕಾಗದ ಸಹ ಬರೆಯದೆ, ಹೋದ ಸಲದಂತೆ, ಬಂದರೂ ಬಂದಳು. ಆದುದರಿಂದ ಮಕ್ಕಳಿಗೆ ನಾಲ್ಕು ದಿನ ಪಾಠ ಹೋದರೂ ಚಿಂತೆಯಿಲ್ಲ. ನಾನು ನಾಡಿದ್ದು ಬುಧವಾರ ಹೊರಟು ಅಲ್ಲಿಗೆ ಬಂದುಬಿಡುವುದೆಂದು ನಿಶ್ಚಯಿಸಿರುವೆನು.

ಅಬ್ಬಬ್ಬಾ! ಲಕ್ಷ್ಮಿಯ ಮಕ್ಕಳು ಲಕ್ಷ್ಮಿಯಂತೆಯೇ ಬಹಳ ತುಂಟ ಮಕ್ಕಳು. ಬೆಳಗಾದರೆ ಮನೆಯಲ್ಲಿ ನಾಲ್ಕೈದು ತರಹದ ಟಿಫನ್‌ಗಳು, ಪಾನಗಳು ಎಲ್ಲ ತಯಾರಿಸಬೇಕು. ಒಂದು ಮಗುವಿಗೆ ಕಾಫಿ ಸೇರಿದರೆ, ಮತ್ತೊಂದಕ್ಕೆ "ಕೋಕೋ"ನೇ ಸೇರುವುದು. ಉಪ್ಪಿಟ್ಟು ಮಾಡಿದರೆ, ಮತ್ತೊಬ್ಬ ದೋಸೆ ಬೇಕೆಂದು ಕೇಳುವನು, ಚಿಕ್ಕ ಹುಡುಗಿ ನಳಿನಿಯಂತೂ ಸಜ್ಜಿಗೆಯೇ ಬೇಕೆಂದು ಹಟಹಿಡಿಯುವಳು. ಮುಂಜಾನೆಯೇ ಎದ್ದು ನಾನು ಒಪ್ಪವಾಗಿ ಕಾಫೀ, ಫಲಹಾರಾದಿಗಳನ್ನು ತಯಾರಿಸಿಟ್ಟುಬಿಡುತ್ತಿದ್ದೆ. ನಾದಿನಿಯಮ್ಮನವರು ನಿಧಾನವಾಗಿ ಹಾಸಿಗೆಯಿಂದೆದ್ದು ಬಂದು, ನನ್ನನ್ನು ಮೇಲ್ವಿಚಾರಣೆ ಮಾಡಲು ಬಂದುಬಿಡುವಳು! "ಏನತ್ತಿಗೆ ಉಪ್ಪಿಟ್ಟನ್ನೇ ಮಾಡಿದೆ! ಅಯ್ಯೊ! ಮಾಧುವೊಬ್ಬನೇ ಉಪ್ಪಿಟ್ಟು ತಿನ್ನಬಲ್ಲ ನಮ್ಮ

ಶಂಕ್ರೂಗೆ ಉಪ್ಪಿಟ್ಟೆಂದರೇನೇ ಜನ್ಮ ದ್ವೇಷ. ಅವನಿಗೆರಡು ಬ್ರೆಡ್ ಸ್ಲೈಸ್ ಟೋಸ್ಟ್ ಮಾಡಿಬಿಡು. ಲಲಿತೆಗಂತೂ ಇವೆರಡನ್ನೂ ಕಂಡರೂ ಓಕರಿಕೆ. ಅವಳಿಗಷ್ಟು ರವೆಯನ್ನು ಮೊಸರಲ್ಲಿ ಕಲಿಸಿ, ದೋಸೆಮಾಡಿಬಿಟ್ಟರಾಯಿತು. ನಳಿನಿಗಂತೂ ಸೀ ತಿಂಡಿನೇ ಇಷ್ಟ. ಹಾಗೆಯೇ ಅರೆಪಾವು ರವೆಹಾಕಿ ಅಷ್ಟು ಸಜ್ಜಿಗೆ ಮಾಡಿಬಿಡು. ಅತ್ತಿಗೆ! ನನಗಾವುದಾದರೂ ಸರಿಯೇ, ಒಂದಿಷ್ಟು ತಿಂದರಾಯಿತು" ಎಂದು ನಯವಾಗಿ ಅಪ್ಪಣೆ ಯಿತ್ತುಬಿಟ್ಟಳು. ಅರ್ಧ ಘಳಿಗೆ ಬಿಟ್ಟು ಪುನಃ ಬಂದು "ಅಯ್ಯೋ, ಹೇಳಲೇ ಮರೆತನಲ್ಲ ಅತ್ತಿಗೆ! ನಳಿನಿಗೆ ಹಾಲು, ಕೋಕೋ. ಕಾಫೀ ಯಾವುದೂ ಸೇರದು. ಮನೆಯಲ್ಲಿ ಹಾರ್ಲಿಕ್ಸ್ ಇದೆಯೋ ಇಲ್ಲವೋ? ಅದನ್ನು ಒಂದು ಚಮಚ ಹಾಲಿಗೆ ಬೆರಸಿ ಕೊಟ್ಟುಬಿಡು ಸಾಕು'' ಎಂದು ಬಹು ಸುಲಭವಾಗಿ ಅಂದುಬಿಡುವಳು. ಹಾರ್ಲಿಕ್ಸ್‌ಮನೆಯಲ್ಲಿಲ್ಲವೆಂದುಬಿಟ್ಟರೋ ಕೋಪ ಎಲ್ಲಿ ಮೀರಿಬಿಡುವುದು. ಈ ಕಾಲದಲ್ಲಿ ಹಾರ್ಲಿಕ್ಸ್. ಗ್ಲೂಕೋಸ್ ಇವೆಲ್ಲ ಸಿಕ್ಕುವುದು ಕುದುರೆಯ ಕೊಂಬಂತಿದೆಯಲ್ಲಾ ಸರಿ, ಸುಮ್ಮಸುಮ್ಮನಾವರೂ ಮನೆಯಲ್ಲಿಯಾರಿಗಾದರೂ ಬಹಳಖಾಯಿಲೆಯೆಂದೂ, ಹಾರ್ಲಿಕ್ಸ್‌ಬಹಳ ಅವಶ್ಯಕವಾಗಿ ಬೇಕಾಗಿದೆಯೆಂದೂ ಡಾಕ್ಟರನ್ನು ಶಿಫಾರಸುಮಾಡ ಹೇಳಿ ಸರ್ಟಿಫಿಕೇಟ್ ಬರೆದುಕೊಡ ಹೇಳಿ, ಅವರಿಗಿಷ್ಟು ಲಂಚತೆತ್ತು, ಡ್ರಗ್ ಕಂಟ್ರೋಲರ್ ಹತ್ತಿರ ಹೋಗಿ ಅನುಮತಿ ಹೊಂದಿ, ಹಾರ್ಲಿಕ್ಸ್ ಕೊಂಡು ತರುವುದರೊಳಗಾಗಿ ಅವರಿಗೆ ಸಾಕು ಸಾಕಾಗಿ ಹೋಯಿತು ಪಾಪ. ಅಡಿಗೆಯಲ್ಲೂ ಇದೇ ಅವಸ್ಥೆಯೇ. "ಒಬ್ಬೊಬ್ಬರಿಗೊಂದು ಸೇರುತ್ತದೆಂದು ಹತ್ತು ತರವೂ ಮಾಡಿ ಯಾಗಬೇಕು. ಇನ್ನೂ ಎಷ್ಟೆಷ್ಟೋ ತೊಂದರೆಗಳು, ಬರೆಯಲು ಹೋದರೆ ದೊಡ್ಡದೊಂದು ಪುಸ್ತಕವೇ ಮುಗಿದುಬಿಡುವುದು. ನನಗಂತೂ ಅವಳನ್ನು ತೃಪ್ತಿಪಡಿಸಿ, ಊರಿಗೆ ಕಳುಹಿಸುವುದರೊಳಗಾಗಿ ಸಾಕು ಸಾಕಾಯಿತಮ್ಮಾ. ಅದೇ ಮತ್ತೆ ಅವಳು ಬರುತ್ತೇನೆಂದು ಬರೆಯುವುದರೊಳಗಾಗಿ ಊರಿಗೆ ಹೊರಟೇಬಿಟ್ಟೆ. ಮಕ್ಕಳಿಗೆ ೨೨ನೆಯ ತಾರೀಖು ಸ್ಕೂಲು ಮುಚ್ಚುತ್ತಾರೆ. ನಾಲ್ಕು ದಿನ ಪಾಠ ಹೋಗುತ್ತದೆ. ಹೋದರೇನೂ ಚಿಂತೆಯಿಲ್ಲ ಬಿಡು.

ಅಣ್ಣನಿಗೆ ನನ್ನ ನಮಸ್ಕಾರ ತಿಳಿಸು

ಇಂತೀ ಪ್ರಿಯ ನಾದಿನಿ.

ಜಾನಕಿ,—ಶೇಲಂ

ಕ್ಷೇಮ, ೧೮—೧೨.......

ತೀರ್ಥರೂಪ ಅಣ್ಣನವರಿಗೆ ಅನೇಕ ನಮಸ್ಕಾರಗಳು. ನಾನು ನಾಳೆಯ ಸಂಜೆಯ ಗಾಡಿಯಲ್ಲಿ ಹೊರಟು ಅಲ್ಲಿಗೆ ಬರುವುದೆಂದು ನಿಶ್ಚಯಿಸಿರುವೆನು. ಮಕ್ಕಳಿಗೆ ಪಾಠಶಾಲೆ ಮುಚ್ಚಿದ ಬಳಿಕ ಅವರನ್ನು ಅವರು (ಯಜಮಾನರು) ಕರೆತಂದು ಬಿಡುವರಾದುದರಿಂದ ನಾನುಮಾತ್ರ ಸೇವಕನನ್ನು ಕರೆದುಕೊಂಡು ಬರುತ್ತೇನೆ. ನನ್ನ ನಾದಿನಿ ಜಾನಕಿ ಇಲ್ಲಿಗೆ ಬರುತ್ತೇನೆಂದು ಬರೆದಿರುವುದರಿಂದ ನಾನು ಮುಂಚೆ ಹೊರಟುಬಿಟ್ಟೆ. ಅವಳು ಬಂದರೆ ಬರಲಿ, ಬಾರದಿದ್ದರೆ ಹೋಗಲಿ. ನನಗೇನಂತೆ ಅದನ್ನು ಕಟ್ಟಿಕೊಂಡು. ಬೇಕಾದರೆ ಅವರು ತಂಗಿಗೆ ''ಮನೆಯಲ್ಲಿ ಸೌಕರ್ಯವಿಲ್ಲ. ಬರಬೇಡ"ವೆಂದು ಬರೆಯಲೇನೀಗ. ಮೂರನೇಯ ವರ್ಷ ಬಂದಳಲ್ಲ ಮಹರಾಯಿಗಿತ್ತಿ! ಅದೆಷ್ಟು ಖರ್ಚು ನಮಗಿಟ್ಟು ಹೋದಳು! ಅವಳು ಸುಮ್ಮನಿದ್ದರೂ ಕೂಡ, ಅವರು ಸುಮ್ಮನಿರಬೇಕಲ್ಲ. ತಂಗಿಗೂ, ತಂಗಿಯ ಮಕ್ಕಳಿಗೂ ರಾಜೋಪಚಾರ ಮಾಡಿದರೂ ಅವರಿಗೆ ತೃಪ್ತಿಯಿಲ್ಲ. ಅವಳು ಊರಿಗೆ ಹಿಂದಿರುಗುವಾಗಲಂತೂ ಉಡುಗೊರೆಗಳನ್ನು ಕೊಂಡು ರಾಶಿ ಹಾಕಿಬಿಟ್ಟರು. ಈ ಕಾಲದಲ್ಲಂತೂ ಬಟ್ಟೆಯ ಬೆಲೆ ಕೇಳಬೇಕೆ? ಏತ ಏರುವಂತೆ ಏರುತ್ತಿದೆಯಲ್ಲ. ೧೦೫ ರೂ. ತೆತ್ತು ಅವಳಿಗೆ ಸೀರೆಯಂತೆ! ಮಕ್ಕಳಿಗೆ ಬಟ್ಟೆಯೆಂದೂ, ಆಟದ ಸಾಮಾನೆಂದೂ ಮಾತ್ರ ೧೫೦ ರೂ. ವರೆಗೆ ಖರ್ಚುಮಾಡಿದರು. ಈ ನಾದಿನಿಯರು ಬಂದರೇನೇ ಅನ್ಯಾಯ ಖರ್ಚು ನಮಗೆ.

ಅತ್ತಿಗೆಗೆ ನನ್ನ ನಮಸ್ಕಾರಗಳನ್ನು ತಿಳಿಸು. ಮಿಕ್ಕ ಸಂಗತಿಗಳು ಮುಖತಃ.

ಇಂತಿ
ಪ್ರಿಯ ತಂಗೀ, ಕಮಲೆ

ಟೆಲಿಗ್ರಾಂ :
ಸೌ. ಕಮಲೆಗೆ C/o. S. ರಾಮಚಂದ್ರ
ಅಸಿಸ್ಟೆಂಟ್ ಇಂಜೀನಿಯರ್, ಶೇಲಂ.

ನಿನ್ನ ಅತ್ತಿಗೆ ತೌರುಮನೆಗೆ ಹೊರಟಿದ್ದಾಳೆ. ಇಲ್ಲಿ ಅಡಿಗೆಯವನು ಸಹ ಇಲ್ಲ. ದಯವಿಟ್ಟು ಬರಬೇಡ.

ಅಣ್ಣ,

ರಾಮಚಂದ್ರ,

ಮದರಾಸು :

---

## ಅನುರಾಧೆಯ ಉಪಾಧ್ಯಾಯಿನಿ

"ಅಮ್ಮಾ, ಅಮ್ಮಾ!" ಈ ದಿನ ಮ್ಯಾಡಂ ನನಗೆ ಇಕೋ! —ಈ 'ಕಲರ್ ಬಾಕ್ಸ್' ಕೊಟ್ರು!" ಎಂದು ಬಹಳ ಸಂತೋಷದೊಡನೆ ಕುಣಿಯುತ್ತ ಬಂದಳು ಮಗು ಅನೂರಾಧೆ.

ಡ್ರಾಯಿಂಗ್ ರೂಂನಲ್ಲಿ ಅಂಗಿ ಹೆಣೆಯುತ್ತ ಕುಳಿತಿದ್ದ ಕಮಲೆಯು "ಎಲ್ಲಿ ನೋಡೋಣ ಬಹಳ ಷೋಕಾಗಿದೆಯಲ್ಲ!" ಎಂದು ಮಗುವಿನ ಕೈಯಿಂದ ಬಣ್ಣದ ಪೆಟ್ಟಿಗೆಯನ್ನು ತೆಗೆದು ತೆರೆದು ನೋಡಿದಳು.

ಕ್ಲಾಸಿನಲ್ಲಿ "ಬಣ್ಣದ ತಗಡಿನ ತುತ್ತೂರಿ" ಹಾಡಿಸಿದರು. ಎಲ್ಲ ಹುಡುಗಿಯರೂ ತಪ್ಪು ತಪ್ಪಾಗಿ ಹಾಡಿದರು. ಸರಿಯಾಗಿ ಹೇಳುವವರಿಗೊಂದು 'ಕಲರ್ ಬಾಕ್ಸ್' ಬಹುಮಾನವೆಂದರು ಮ್ಯಾಡಂ. ನಾನೇ ಮತ್ತೆ ಸರಿಯಾಗಿ ಹೇಳಿದೆ action ಸಹಿತ" ಎಂದಳು ಅನುರಾಧೆ.

"ನೀನು ಬಹಳ ಜಾಣೆಯಲ್ಲವೇ! ಮ್ಯಾಡಂಗೆ ಸಹ ನೀನು ಬಹಳ ಮುದ್ದು!! ಎಂದು ಮಗುವನ್ನು ಬಾಚಿ ತಬ್ಬಿಕೊಂಡಳು ತಾಯಿ.

ಮಿಸೆಸ್ ವಾಣೀ B. A. ನೇ ಅನೂರಾಧೆಯ ಉಪಾಧ್ಯಾಯಿನಿ. ಆ ಊರಿನ ಮಹಿಳಾ ಸಮಾಜದ ಸದಸ್ಯರುಗಳಿಂದ ಆ ಸಮಾಜದ ಕಟ್ಟಡದಲ್ಲಿಯೇ ನಡೆಸಲ್ಪಡುವ ಶಿಶುವಿಹಾರದಲ್ಲೇ ನಮ್ಮ ಅನುರಾಧೆ ಸೇರಿದ್ದಳು. ಆ ಶಿಶುವಿಹಾರದ ಮಕ್ಕಳ ಸಂಖ್ಯೆ 75. ಅದನ್ನು A. Section B Section ಎಂದು ಇಬ್ಭಾಗ ಮಾಡಿ ಇಬ್ಬರು ಉಪಾಧ್ಯಾಯಿನಿಯರನ್ನು ನಿಯಮಿಸಿದ್ದರು. ಅವರಲೊಬ್ಬರು ಮಿಸೆಸ್ ವಾಣಿ B A ಅನೂರಾಧೆಯ ತಂದೆಗೆ ಆ ಊರಿಗೆ ವರ್ಗವಾಗಿ ಇನ್ನೂ ಎರಡು ತಿಂಗಳು ಸಹ ಆಗಿರಲಿಲ್ಲ. ಅಷ್ಟರೊಳಗಾಗಿಯೇ ವಾಣಿಗೂ ಅನುರಾಧೆಗೂ ನಡುವೆ ಮೋಹಿತ ಪ್ರೇಮವೆಂಬ ಸಸಿಯು ಸೊಂಪಾಗಿ ಬೆಳೆದು ಪೂರ್ಣ ಪುಷ್ಪಿತವಾಗಿದ್ದಿತು. ಅನೂರಾಧೆ ಒಂದು ದಿನ ಮಾತ್ರಕ್ಕೆ ಶಿಶುವಿಹಾರಕ್ಕೆ ಬಾರದಿದ್ದರೆ, ವಾಣಿಯ ಕಣ್ಮಣಿಗಳು ಆ ಮಕ್ಕಳ ಗುಂಪಿನೊಳಗೆ ಹಾದು ಅವಳನ್ನು ಹುಡುಕಲಾರಂಭಿಸಿ

ಬಿಡುವುವು. ತಕ್ಷಣ ಮಗುವೇಕೆ ಬರಲಿಲ್ಲವೆಂದು ಕೇಳಿಬಾರೆಂದು ಆಳನ್ನು ಅವಳ ಮನೆಗೆ ಓಡಿಸಿಬಿಡುವಳು. ಮಗು ಅನುರಾಧೆಯ ಹೊಳಪಾದ ಕಣ್ಣುಗಳೂ, ಮುತ್ತಿನಂತಹ ತೊಪಲ್ನುಡಿಗಳೂ, ಜಾಣ್ಮೆಯೂ ಎಂತಹವರ ಹೃದಯವನ್ನೂ ಸಹ ಆಕರ್ಷಿಸುವಂತಿತ್ತು. ಬಾಲಗೋಪಾಲನನ್ನು ಆರಾಧಿಸುವ ಪುಣ್ಯವತಿ ವಾಣಿಯು ಹೃದಯವನ್ನು ಆ ಮಗು ಆಕರ್ಷಿಸಿದುದರಲ್ಲಿ ಅತಿಶಯವೇನಿದೆ ?

ಅವಳ ನೊಂದ ಹೃದಯಕ್ಕೆ ಆ ಪುಟ್ಟ ಬಾಲಕಿಯ ಮೇಲೆ ಅವಳಿಗೇರ್ಪಟ್ಟ ಪ್ರೇಮವು ಮುಲಾಮಿನಂತೆ ಪರಿಣಮಿಸಿತು. ಮಗುವೆಂದರೆ ಅವಳಲ್ಲವೇ ಮಗು. ಸ್ಫಟಿಕ ಸರೋವರದಂತಹ ನಿರ್ಮಲ ಹೃದಯ, ಅದರಲ್ಲಿ ತುಂಬಿ ತುಳುಕುತ್ತಲಿರುವ ಪ್ರೇಮವೆಂಬ ಪುನಿತ ಉದಕವನ್ನು ತನ್ನನ್ನು ಪ್ರೀತಿಯಿಂದ ಕಾಣುವವರ ಮೇಲೆ ವರ್ಷಿಸುತ್ತಲಿದ್ದಳು ಆ ಮಗು. ತರಗತಿಯಲ್ಲಿ ಆಟವಲ್ಲಾಗಲೀ, ಪಾಠವಲ್ಲಾಗಲೀ, 'ಡ್ರಿಲ್' ನಲ್ಲಾಗಲೀ, Recitation ನಲ್ಲಾಗಲೀ ಅನುರಾಧೆಯೇ ಮೊದಲು ( first ). ಅವಳ ಆಕರ್ಷಣೀಯವಾದ ಮುಖ ಲಕ್ಷಣದೊಡನೆ, ಅವಳ ಬುದ್ಧಿ ಸೂಕ್ಷ್ಮವೂ, ಧಾರಾಳ ಬುದ್ಧಿಯೂ ಸೇರಿ ಮಿಸ್ ವಾಣಿಯನ್ನು ಸೂಜಿಗಲ್ಲಿನಂತೆ ಅವಳೆಡೆಗೆ ಸೆಳೆಯಿತು.

ಇವರ ನಡುವೆ ಅನುರಾಧೆ ಅಕಸ್ಮಾತ್ತಾಗಿ ಡಬಲ್ ನ್ಯೂಮೋನಿಯಾ ಜ್ವರ. ಕಂಡು ನರಳಲಾರಂಭಿಸಿದಳು. ನಾಲ್ಕೈದು ದಿನಗಳಿಂದ ತರಗತಿಯಲ್ಲಿ ಅನುರಾಧೆಯನ್ನು ಕಾಣದೆ ವಾಣಿಯ ಹೃದಯವು ಕರುವನ್ನು ಕಾಣದ ಗೋವಿನಂತೆ ಚಟಪಟಿಸಿತು. ಅವಳನ್ನು ಕಳುಹಿಸಿ ವಿಚಾರಿಸಿ ಬರಹೇಳಿದ ಮೇಲೆ ನಿಜಾಂಶ ತಿಳಿಯಿತು. ಆ ಸಮಯ ವಾಣಿಯ ಮನಸ್ಸು ನೊಂದಷ್ಟು ಅನುರಾಧೆಯ ಹೆತ್ತ ತಾಯಿಯ ಮನಸ್ಸು ಕೂಡ ನೊಂದಿರಲಾರದು. ಅಂದಿನಿಂದ ಪ್ರತಿನಿತ್ಯವೂ ಪಾಠಶಾಲೆ ಮುಗಿದೊಡನೆಯೇ ಅಲ್ಲಿಂದ ನೆಟ್ಟಗೆ ಅನುರಾಧೆಯ ಮನೆಗೆ ಹೋಗಿ ಅವಳನ್ನು ಕಂಡ ಹೊರತು ಮನೆಗೆ ಹಿಂದಿರುಗಳು ವಾಣಿ. ಅವಳ ದರ್ಶನವೇ ಆ ಬಾಲಕಿಗೆ ಔಷಧಿಯಂತೆ ಪರಿಣಮಿಸಿ, ದಿವದಿಂದ ದಿನಕ್ಕೆ ಕ್ರಮೇಣ ಖಾಯಿಲೆ ಗುಣವಾಗುತ್ತ ಬಂದಿತು. ವಾಣಿ ಒಂದು ದಿನವಾದರೂ ಬರಿಯ ಕೈಯಲ್ಲಿ ಅನುರಾಧೆ

ಯನ್ನು ನೋಡಲು ಹೋಗಲಾರಳು. 'ರಿಬ್ಬನ್ಸ್', 'ಬ್ರೂಚ್' ಚಾಕಲೇಟ್ ಪೆಪ್ಪರ್‌ಮೆಂಟ್, ಬೊಂಬೆ, ಹೂ ಎಂದು ಏನಾದರೊಂದನ್ನು ಕೊಂಡು ತಂದು ಮಗುವಿನ ಕೈಯಲ್ಲಿ ಕೊಟ್ಟು ಮಾತನಾಡಿಸಿ ಬರುವಳು.

* * * *

ಅಂದು ಭಾನುವಾರ ಸಂಜೆ. ದಿನವೂ ಉಪಾಧ್ಯಾಯಿನಿಯು ಅನು ರಾಧೆಯನ್ನು ನೋಡಲು ಬರುವ ಸಮಯವದು. ಅನುರಾಧೆಯ ತಾಯಿ ತಂದೆಯರಿಬ್ಬರೂ ಅವಳ ಸಮೀಪದಲ್ಲಿ ಕುಳಿತು ಮಾತನಾಡುತ್ತಲಿದ್ದರು. ಅನುರಾಧೆಯಂತೂ ತನ್ನ ಪ್ರೀತಿಯ 'ಮ್ಯಾಡಂ'ನ ಬರವನ್ನು ಘಳಿಗೆ ಘಳಿಗೆಗೂ ನಿರೀಕ್ಷಿಸುತ್ತ ಬಾಗಿಲ ಕಡೆಗೇ ನೋಡುತ್ತಿದ್ದಳು. ಆಗ ಅಲ್ಲಿ ಜವಾನನೊಬ್ಬನು ಚೀಟಿಯೊಂದನ್ನು ತಂದು ಕಮಲೆಯ ಕೈಗೆ ಕೊಟ್ಟು ಹೋದನು. ಕಮಲೆಯು ಅದನ್ನು ಓದಿನೋಡಿ "ಚಿನ್ನಾ, ಮ್ಯಾಡಂ ಈ ದಿನ ಬರಲು ಕೊಂಚ ಹೊತ್ತಾಗಬಹುದೆಂದು ಬರೆದು ಕಳುಹಿಸಿದ್ದಾರೆ'' ಎಂದಳು.

ಅನುರಾಧೆಯ ತಂದೆಯು "ಅದ್ಯಾರೇ ಅದು ಆ ಮ್ಯಾಡಂ? ಅವ ಳನ್ನು ಕುರಿತು ತಾಯಿ ಮಗಳಿಬ್ಬರೂ ದಿನಾಲೂ ಅಷ್ಟೊಂದು ಮಾತನಾಡಿ ಕೊಳ್ಳುವಿರಿ?'' ಎಂದರು.

"ತಡೀರಿ, ಇನ್ನು ಕೊಂಚ ಹೊತ್ತಿಗೆ ಬರುತ್ತಾಳೆ. ನಿಮಗೆ ಅವ ಳನ್ನು introduce ಮಾಡಿಸುತ್ತೇನೆ. ಬಹಳ ಒಳ್ಳೆಯವಳಾಕೆ. ನನಗಿಂತ ಒಂದೆರಡುವರ್ಷ ಹಿರಿಯವಳಿರಬೇಕಷ್ಟೇ. ಅಷ್ಟೊಂದು ಚಿಕ್ಕ ಪ್ರಾಯದಲ್ಲಿ ತಾಯಿ ತಂದೆಯರನ್ನೂ ಕಳೆದುಕೊಂಡು, ಗಂಡನಿಂದಲೂ ನಿರಾಕೃತಳಾಗಿ ಬಹಳ ನೊಂದಿರುವಳು ಪಾಪ! ಅದೊಂದು ದಿನ ನಮ್ಮ ಸಮಾಜದ ಸೆಕ್ರೆಟರಿ ಲಲಿತಮ್ಮನು ಅವಳ ಚರಿತ್ರೆಯನ್ನು ಹೇಳಿದಳು. ಬಹಳ ಪರಿತಾಪಕರವಾಗಿದೆ.

"ಅವಳ ಗಂಡ ಅವಳನ್ನೇಕೆ ನಿರಾಕರಿಸಿದನಂತೆ?"

"ಅವಳ ತಂದೆ ದೊಡ್ಡ ಜಮೀನ್ದಾರರಂತೆ. ಅವರಿಗೆ ಈಕೆ ಯೊಬ್ಬಳೇ ಮಗುವಂತೆ. ಅವಳು ಸಣ್ಣ ಮಗುವಾಗಿರುವಾಗಲೇ ತಾಯಿಯೂ

ತೀರಿಹೋದುದಳಾದ್ದರಿಂದ ಜಮೀನ್ದಾರರೇ ಮಿಸೆಸ್ ವಾಣಿಯನ್ನು ಬಹಳ ಅಕ್ಕರೆಯಿಂದಲೂ, ಮುದ್ದಾಗಿಯೂ ಸಾಕಿ ಸಲಹಿದರಂತೆ. ಅವಳ ಸುಖಕ್ಕೆ ಭಂಗ ಬರಬಾರದೆಂದು ತಾನೂ ಸಹ ಪುನರ್ವಿವಾಹವಾಗಲಿಲ್ಲವಂತೆ. ಅದ ರವರು ಬಹಳ ಒರಟು ಸ್ವಭಾವದವರಂತೆ. ವಾಣಿ ವಿವಾಹ ವಯಸ್ಕಳಾಗಲು ಬಡವನಾದರೂ ಚಿಂತೆಯಿಲ್ಲ, ಒಳ್ಳೆಯ ಗುಣಶೀಲನೂ, ಸುಂದರನೂ, ವಿದ್ಯಾವಂತನೂ ಆದ ವರನಿಗೆ ಅವಳನ್ನು ಕೊಟ್ಟು ಮದುವೆಮಾಡಿ ಮಗ ಳನ್ನೂ, ಅಳಿಯನನ್ನೂ ತನ್ನ ಸಮೀಪದಲ್ಲಿಯೇ ಇಟ್ಟುಕೊಳ್ಳಬೇಕೆಂಬ ಬಯಕೆಯಿಂದ ವರನ ಬೇಟೆಗೆ ಹೊರಟರಂತೆ. ಅವರಿಷ್ಟದಂತೆಯೇ ವರನೂ ದೊರಕಿದನಂತೆ. ಇನ್ನೇನು, ಮದುವೆಯೂ ಆಯಿತು. ಅಳಿಯನಿಗೆ ಕುಂಭ ಕೋಣದಲ್ಲಿ ಸಣ್ಣದೊಂದು ಉದ್ಯೋಗ. ಅಳಿಯನಂತೂ M. A. ಪದವೀ ಧರ. ಮನೆಯಲ್ಲಿ ಸುಮ್ಮನೆ ಕುಳ್ಳಿರೆಂದರೆ ಕುಳಿತುಕೊಳ್ಳುವನೇ! ಜಮೀ ನ್ದಾರರು "ಕೆಲಸಗಿಲಸವಾವುದೂ ಮಾಡಬೇಕಾಗಿಲ್ಲ. ನನಗೂ ವಯಸ್ಸಾ ಯಿತು. ನನ್ನ ಹತ್ತಿರವೇ ಸುಖವಾಗಿದ್ದುಕೊಂಡು, ನನಗೆ ಸಹಾಯಕ ನಾಗಿದ್ದುಬಿಡು" ಎಂದರಂತೆ, ಅಳಿಯರಾಯನಿಗೆ. ಆದರೆ ಅಳಿಯನೊಬ್ಬ ಸ್ವಾತಂತ್ರ್ಯಪ್ರಿಯ. ಮಾವನವರ ಮನೆಯ ಅಳಿಯನಾಗಿ ಮಾವನವರ ಕೃಪೆಯಿಂದ ಹೊಟ್ಟೆ ಹೊರೆಯಲು ಅವನಿಗಿಷ್ಟವಿಲ್ಲ. ಮಾವನವರ ಮಾತು ಕೇಳದೆ ಕೆಲಸಕ್ಕೆಹೋಗಿ ಸೇರಿಯೇಬಿಟ್ಟ! ಕೆಲದಿನಗಳ ಬಳಿಕ, ಮನೆ ಗೊತ್ತುಮಾಡಿದುದಾಯಿತೆಂದೂ, ಹೆಂಡತಿಯನ್ನು ಕರೆತಂದು ಬಿಡಬೇಕೆಂದೂ, ಮಾವನವರಿಗೊಂದು ಪತ್ರ ಬರೆದ. ಮಾವನವರಂತೂ ಒರಟು ಮನುಷ್ಯ. ಹಠವಾದಿಯೆಂದೆನಲ್ಲಾ, ತನ್ನ ಮುದ್ದುಗುವರಿಯನ್ನು ತಂದುಬಿಡುವುದು ಅಸಾಧ್ಯವೆಂದೂ, ಅವಳಿಗೆ ಸಣ್ಣ ಪುಟ್ಟ ಮನೆಯಲ್ಲಿ ವಾಸಮಾಡಿಕೊಂಡು, ಕಷ್ಟ ಕೆಲಸಗಳನ್ನುಮಾಡಿ ರೂಢಿಯಿಲ್ಲವೆಂದೂ, ಹೆಂಡತಿಯ ಮೇಲೆ ಅಭಿ ಮಾನವಿರುವ ಪಕ್ಷದಲ್ಲಿ, ಅವನೇ ಕೆಲಸಕ್ಕೆ ರಾಜೀನಾಮೆಕೊಟ್ಟು ತನ್ನಲ್ಲಿಗೆ ಬಂದು ಸುಖವಾಗಿರುವುದರಲ್ಲಿ ಅಭ್ಯಂತರವೇನೂ ಇಲ್ಲವೆಂದೂ ಅಳಿಯನಿಗೆ ಮಾವನವರು ತೀರ್ಮಾನವಾಗಿ ಪತ್ರಬರೆದುಬಿಟ್ಟರು. ಮಾವನವರ ಮತ್ತು ಅಳಿಯನ ಮನಸ್ತಾಪಗಳ ನಡುವೆ ಸಿಲುಕಿಕೊಂಡು ಒದ್ದಾಡಿದಳು ಅರಿಯದ ಹುಡುಗಿ ವಾಣಿ, ಪಾಪ! ಯೋಚಿಸಿ, ಯೋಚಿಸಿ, ಹಿಂಜರಿದು, ಹಿಂಜ

ರಿದು ಕೊನೆಗೆ ವಾಣಿಯು "ಅಪ್ಪನ ಮಾತಿರಲಿ, ನಾನು ಬರಲು ತಯಾರಿದ್ದೇನೆ. ಅಗತ್ಯ ನನ್ನನ್ನು ಬಂದು ಕರೆದುಕೊಂಡುಹೋಗಿ" ಎಂದು ಗಂಡನಿಗೆ ಎಷ್ಟೆಷ್ಟೋ ಸಮಾಧಾನೋಕ್ತಿಗಳನ್ನು ಬರೆದು ಹಾಕಿದಳು. ಒಂದಕ್ಕೂ ಉತ್ತರವಿಲ್ಲ. ಇದರ ನಡುವೆ ಜಮೀನ್ದಾರರು ಹೃದಯ ರೋಗದಿಂದ ಪೀಡಿತರಾಗಿ ಆಕಸ್ಮಾತ್ತಾಗಿ ಕಾಲವಾಗಿ ಹೋಗಲು, ತಬ್ಬಲಿ ವಾಣಿ ಸೋದರಮಾವನ ಆಶ್ರಯದಲ್ಲಿ ವಾಸಿಸಲಾರಂಭಿಸಿದಳು. ತನ್ನನ್ನು ಹೇಗಾದರೂ ಮಾಡಿ ಕರೆದುಕೊಂಡು ಹೋಗಿ, ಗಂಡನ ಹತ್ತಿರ ಸೇರಿಸಿಬಿಡಿರೆಂದು ಅವಳು ತನ್ನ ಸೋದರಮಾವನ ಹತ್ತಿರ ಬಹಳ ಪೇಚಾಡಿದಳು. ಅವಳ ಸೋದರಮಾವನು ಕುಂಭಕೋಣಂಗೆ ಹೋಗಿ ವಿಚಾರಿಸಿ ನೋಡಲಾಗಿ, ವಾಣಿಯ ಗಂಡನು ಆ ಊರನ್ನು ಬಿಟ್ಟುಹೋಗಿ ಕೆಲತಿಂಗಳಾಯಿತೆಂದು ವರ್ತಮಾನ ತಿಳಿಯಿತು. ಕೆಲವರು ವಾಣಿಯ ಗಂಡನು ಉಚ್ಚ ಶಿಕ್ಷಣಕ್ಕಾಗಿ ವಿಲಾಯಿತಿಗೆ ತೆರಳಿದನೆಂದೂ, ಮದರಾಸ್ ಸರಕಾರದಿಂದ ಅವನಿಗೆ ಗೌರವ ವೇತನ (Merit Scholarship) ದೊರಕಿದೆಯೆಂದೂ ಕೆಲವರೂ ಹೇಳಿದರಂತೆ. ಆ ಬಳಿಕ ವಾಣಿಯ ಗಂಡನ ವಿಷಯವಾದ ಯಾವದೊಂದು ವರ್ತಮಾನವೂ ತಿಳಿಯಲಿಲ್ಲವಂತೆ. ಕೊರಗಿ ಕೊರಗಿ, ನಶಿಸಿಹೋಗುತ್ತಲಿರುವ ವಾಣಿಗೆ ಕೊಂಚ ಬದಲಾವಣೆಯೂ, ಶಾಂತಿಯೂ ಏರ್ಪಡಲೆಂದು ಅವಳ ಸೋದರಮಾವನು ಇಷ್ಟರಲ್ಲಿಯೇ S. S. L. C. ಪರೀಕ್ಷೆಯಲ್ಲಿ ಉತ್ತೀರ್ಣಳಾಗಿದ್ದುದರಿಂದ ಅವಳನ್ನು ಮದರಾಸಿಗೆ ಕರೆತಂದು ಕ್ವೀನ್ ಮೇರಿ ವಿಶ್ವವಿದ್ಯಾಲಯದಲ್ಲಿ ಸೇರಿಸಿದರಂತೆ. ಕಳೆದ ವರ್ಷ B. A. ಪದವೀಧರಳಾಗಿ, ಈ ಊರಿನ ಶಿಶುವಿಹಾರದಲ್ಲೊಂದು ಕೆಲಸವಿದೆಯೆಂಬುದನ್ನು ಜಾಹೀರಾತು ಮೂಲಕ ತಿಳಿದು, ಬಂದು ಸೇರಿದ್ದಾಳೆ. ಬೇಕು ಬೇಕಾದಷ್ಟು ಐಶ್ವರ್ಯವಿದೆ, ಕೈತುಂಬ ಸಂಬಳ ಬೇರೆ. ನೋಡಲಂತೂ ಅತಿ ಚೆಲುವೆ. ಆದರೇನಂತೆ? ಮನಸ್ಸಿಗೆ ನೆಮ್ಮದಿಯಿಲ್ಲ. ಅವಳ ರೂಪೂ, ಸೌಂದರ್ಯವೂ, ಸದ್ಗುಣವೂ ಕಾಡಿನಲ್ಲಿ ಚೆಲ್ಲಿದ ಬೆಳದಿಂಗಳಿನಂತಲ್ಲವೇ ಇದೆ............ಎಂದು ಕಮಲೆಯು ಹೇಳುತ್ತಿರುವಾಗಲೇ ಜವಾನ ಬಂದು "ಮ್ಯಾಡಂ ಬಂದರು" ಎಂದುತಿಳಿಸಿಹೋದ. ಮರುಕ್ಷಣ ಸಾಕ್ಷಾತ್ ಸೌಂದರ್ಯ ದೇವತೆಯೇ ಪ್ರತ್ಯಕ್ಷಳಾದಳೋ ಎಂಬಂತೆ, ತರುಣಿಯೋರ್ವಳು ಆ ಕೊಠಡಿಯೊಳಗೆ

ಪ್ರವೇಶಿಸಿದಳು. ರಘುಪತಿ ತಲೆಯೆತ್ತಿ ನೋಡಿದ. "ಹಾ, ಮಧುರಾ! ನೀನೇ!!" ಎಂದು ಅವನರಿವಿಲ್ಲದೆ ಕಿರಿಚಿದ. ಮಿಸೆಸ್ ಮಧುರವಾಣಿ ನಾಚಿಕೆಯಿಂದ ತಲೆತಗ್ಗಿಸಿ ನಿಂತಳು, ಕೊಂಚ ಚೇತರಿಸಿಕೊಂಡು, ರಘುಪತಿಯ ಪಾದಗಳಲ್ಲಿ ಬಿದ್ದು ನಮಸ್ಕರಿಸಿದಳು. ರಘುಪತಿ ಪ್ರೇಮಪೂರ್ವಕವಾಗಿ ಅವಳನ್ನು ಹಿಡಿದೆಬ್ಬಿಸಿದನು. ಕಮಲೆಯು ಅರೆಕ್ಷಣದಲ್ಲಿ ವಿಷಯವೇನೆಂಬುದನ್ನು ಗ್ರಹಿಸಿದಳು.

* * * *

ಅನೂರಾಧೆಯ ಉಪಾಧ್ಯಾಯಿನಿಯು ಅನುರಾಧೆಯ ದೊಡ್ಡಮ್ಮನೂ ಆದಳೆಂದರೆ ಆ ಪುಟ್ಟಬಾಲಕಿಗುಂಟಾದ ಆನಂದ ಕೋಲಾಹಲವನ್ನು ವಿವರಿಸಲು ಸಾಧ್ಯವೇ? ಇನ್ನು ಆ ಪ್ರೇಮಮಯಿಗಳಿಬ್ಬರೂ ಒಬ್ಬರನ್ನೊಬ್ಬರು ಬಿಟ್ಟು ಅಗಲಿರಬೇಕಾಗಿಲ್ಲವಷ್ಟೆ!

---

# ಚಾರುಮತಿಯ ಆಸೆ

ನನಗೆ ಚಿಕ್ಕ ಪ್ರಾಯದಿಂದಲೂ ಒಡವೆಯ ಮೇಲಿನ ಹುಚ್ಚು ಸ್ವಲ್ಪ ಅಧಿಕವೇ ಹೌದು. ನಾನು ಮಗುವಾಗಿದ್ದಾಗ ರಸ್ತೆಯಲ್ಲಿ ಬೊಂಬಾಯಿ ಬಳೆಯುವನು ಹೋದರೆ ನನ್ನ ಕೈಯಲ್ಲಿ ಕಾಲಾಣೆಯ ಬಳೆಗಳಾದರೂ ಹತ್ತಿದ ಶೀನೇ ತೆರೆದ ಬಾಯನ್ನು ಮುಚ್ಚುತ್ತಲಿದ್ದೆನು. "ಬೆಕ್ಕಿಗೆ ಚೆಲ್ಲಾಟ ಇಲಿಗೆ ಪ್ರಾಣಸಂಕಟ" ಎಂಬ ಗಾದೆಯಂತೆ ನನ್ನಿಂದ ಬಳೆಯುವನಿಗೆ ಕೊಂಡಾಟ. ಆದರೆ ಅಪ್ಪನ ಮುಖವನ್ನು ನೋಡಬೇಕಲ್ಲಾ ! ಅಪ್ಪನು ಮನೆಯಲ್ಲಿ ಇಲ್ಲ ದಾಗ, ನನ್ನ ರೋಧನವು ಸಫಲ ಹೊಂದುತ್ತಲಿರಲಿಲ್ಲ.

ರಸ್ತೆಯ ತುದಿಯಿಂದಲೇ ಬೊಂಬಾಯಿ ಬಳೆಯವನ ಕೂಗು ಕೇಳ ಬರುತ್ತಿರುವಾಗಲೇ, ನಾನು ಯಾವ ಕೆಲಸದಲ್ಲಿ ಇದ್ದರೂ ಸಹ ಒಂದೇ ಓಟ ತೆಗೆದು ಬೀದಿಯ ಬಾಗಿಲಿಗೆ ಬಂದು, "ಬೊಂಬಾಯಿ ಬಳೆ ! ಏಯ್ ಬೊಂಬಾಯಿ ಬಳೆ !" ಎಂದು ಕಿರಿಚಿ ಅವನನ್ನು ಕರೆದು ಬೀದಿಯ ಜಗುಲಿಯಲ್ಲಿ ಕುಳ್ಳಿರಿಸಿದ ನಂತರವೇ, ಅಮ್ಮನಿಗೆ ಹೇಳುವ ವಾಡಿಕೆ, ಅಮ್ಮನು "ಪೀಡೆ, ತೊಲಗೇ ಆಚೆ. ದಿನವಹಿ ನಿನ್ನ ಕೈಗೆ ಬಳೆ ಗಳನ್ನು ಹಾಕಲು ಯಾರಿಂದ ಸಾಧ್ಯವೇ ? ಹಿತ್ತಲಲ್ಲಿ ಕಾಸಿನ ಗಿಡ ವಿದೆಯೆಂದು ತಿಳಿದಿರುವೆಯೇನು ? ನಿನ್ನನ್ನು ಮದುವೆಯಾದ ಗಂಡನಿಗೆ ಒಳ್ಳೆಯ ಪೇಚಾಟವೇ ಸರಿ. ಅವನು ನಿನಗೆ ಹೊಸ ಹೊಸ ಸೀರೆಗಳನ್ನೂ, ಒಡವೆ ವಸ್ತುಗಳನ್ನೂ ಕೊಂಡು ಕೊಟ್ಟು ಸಾಧಿಸುವುದನ್ನು ಆಗ ನೋಡು ವೆನು !" ಎಂದು ಬೈಗಳ ಮಳೆಯನ್ನು ಸುರಿದು ಕೊನೆಗೆ 'ರಪ್, ರಪ್' ಎಂದು ಎರಡೇಟನ್ನು ಕೊಟ್ಟು ಬೀದಿಯ ಬಾಗಿಲನ್ನು ಎಳೆದು ಅಗಣೀ ಹಾಕಿಬಿಡುವಳು. ಬೊಂಬಾಯಿ ಬಳೆಯವನು ಬೀದಿಯಲ್ಲಿ ನಿಂತು ಗಲಾಟೆ ಮಾಡುವನು. ಅಮ್ಮನು "ಮಗುವು ಕರೆದ ಮಾತ್ರಕ್ಕೆ ನಿನ್ನನ್ನು ಬರ ಹೇಳಿದವರಾರೋ ? ಬುದ್ಧಿಯುವರು ಮನೆಯಲ್ಲಿಲ್ಲ ಹೊರಟುಹೋಗೋ" ಎನ್ನುವಳು. ಒಂದೊಂದು ದಿವಸ ಅಜ್ಜಿಗೆ ಮನಬಂದರೆ "ಯಾಕೆ ಮಗು

ವನ್ನು ಹೀಗೆ ಅಳುಸುತ್ತಿರ-ವೆಯೋ ಸ್ವಲ್ಪ ತಾರೋ ಕೆಟ್ಟಿ, ದಂತದಲ್ಲಿ ಕೊರೆದು ತೆಗೆದಂತಹ ಆ ದುಂಡನೆಯ ಬಿಳಿಯ ಕೈಗೆ ಬಳೆ ಹಾಕಿಬಿಟ್ಟರೆ ಎಷ್ಟು ಅಂದವಾಗಿರುತ್ತದೆ! ಉಪ್ಪಿನ ಮರಿಗೆಯಲ್ಲಿ ಮೊನ್ನೆಯದಿನ ಮೊಸರು ಕೊಂಡು ಕೊಂಡ ಬಾಕೀ ಹಣ ಮೂರು ಕಾಸು ಹಾಕಿರುವೆನು ಹೋಗಿ ತೆಗೆದುಕೊಂಡು ಬಾರೇ ಲಕ್ಷ್ಮೀ" ಎಂದು ಸೊಸೆಗೆ ಅಪ್ಪಣೆ ಯಿತ್ತು "ಬಾರೇ ಚಿನ್ನಾ'' ಎಂದು ನನ್ನನ್ನು ಬೀದಿಗೆ ಕರೆದುಕೊಂಡು ಹೋಗಿ ನನಗೆ ಇಷ್ಟವಾದ ಬಳೆಗಳನ್ನು ಹಾಕಿಸುವಳು. ಅಂದು ನನಗೆ ಯೋಗವೇ ಸರಿ ಅಜ್ಜಿಗೆ ಮನಬಾರದಿದ್ದರೋ ಅಮ್ಮನೊಡನೆ ಸೇರಿಕೊಂಡು ಬೈಯಲು ಪ್ರಾರಂಭಿಸಿಬಿಡುವಳು. ಅಪ್ಪನು ಮನೆಯಲ್ಲಿ ಇದ್ದಲ್ಲಿ ಯಾವ ತೊಂದರೆಯೂ ಇಲ್ಲ.

ಹಬ್ಬ ಹುಣ್ಣಿಮೆಯ ದಿವಸಗಳಲ್ಲಿ ಎಲ್ಲ ಮಕ್ಕಳೂ ಭಕ್ಷ್ಯ ಭೋಜ್ಯಗ ಳನ್ನು ಊಟಮಾಡುವುದರಲ್ಲೂ; ಹೊಸ ಉಡುಪುಗಳನ್ನು ಧರಿಸುವುದ ರಲ್ಲೂ ತಮ್ಮ ಆನಂದವನ್ನು ಇಬ್ಭಾಗಮಾಡಿ ಕೊಂಡಾಡಿದರೆ, ನಾನು ಹೊಸ ಉಡಿಗೆ ತೊಡಿಗೆಗಳನ್ನು ಧರಿಸುವುದರಲ್ಲಿಯೇ ನನ್ನ ಪೂರ್ತಿ ಸಂತೋಷವನ್ನೂ ಅನುಭವಿಸುವೆ. ಅಂದೆಲ್ಲವೂ ಉಪವಾಸ ಇರಹೇಳಿ ದರೂ ಇರಬಲ್ಲೆ, ನನಗೆ ಅದು ಲಕ್ಷ್ಯವಿಲ್ಲ. ನನ್ನನ್ನು ನನ್ನ ತಂದೆಯು "ಷೋಕೀಲಾಲ್" ಎಂದು ಪರಿಹಾಸ್ಯವಾಗಿ ಕರೆಯುವರು.

"ದೊಡ್ಡವಳಾದ ಬಳಿಕ ಶ್ರೀಮಂತನಾದ ಪತಿಯನ್ನು ಮದುವೆಯಾಗಿ, ಬೇಕಾದಷ್ಟು ಹೊಸ ನಮೂನೆ ಸೀರೆಗಳನ್ನೂ, ಒಡವೆ ವಸ್ತುಗಳನ್ನೂ ಮಾಡಿಸಿಕೊಳ್ಳುವೆನಂತೆ............'' ಎಂದೆಲ್ಲಾ ಚಿಕ್ಕಂದಿನಲ್ಲಿ ಮನೋ ರಾಜ್ಯವನ್ನು ಕಟ್ಟುತ್ತಲಿದ್ದೆ. ಆದರೆ ನಾನು ಒಂದು ಬಡ ಕುಟುಂಬದಲ್ಲಿ ಹತ್ತು ಮಕ್ಕಳ ನಡುವೆ ಒಬ್ಬಳಾಗಿ ಜನಿಸಿದೆ. ವಿವಾಹವಾದದ್ದೂ ಒಂದು ಬಡವನನ್ನು. ವಿವಾಹದ ಬಳಿಕ ನನ್ನ ಮನೋರಾಜ್ಯದ ಭವ್ಯ ಭವನ ಗಳೆಲ್ಲವೂ ನುಚ್ಚು ನೂರಾದುವು. ಪರಮಾತ್ಮನು ನನ್ನನ್ನು ವಂಚಿಸಿದನೆಂದು ಕೆಲವು ಸಮಯಗಳಲ್ಲಿ ನೊಂದುಕೊಳ್ಳುತ್ತಲಿದ್ದೆ. ಆದರೆ ನನಗೆ ನನ್ನ ಪತಿಯ ಮೇಲೆ ಅಗಾಧವಾದ ಪ್ರೇಮವೂ ಭಕ್ತಿಯೂ ಉಂಟು.

ಒಳ್ಳೆಯ ಸೀರೆಯೋ, ಒಡವೆಯೋ? ಈ ಎರಡು ರೂಪಾಯಿಯ ನೂಲಿನ ಸೀರೆಯನ್ನುಟ್ಟುಕೊಂಡು ನಾನು ಹೋಗಲು ತಯಾರಿಲ್ಲ." ಎಂದು ದುಃಖವೂ, ಕೋಪವೂ ಹೊಮ್ಮುತ್ತಲಿರುವ ಧ್ವನಿಯಲ್ಲಿ ಸ್ವಲ್ಪ ಜೋರಾಗಿಯೇ ಮಾತಾಡಿಬಿಟ್ಟೆ. ಆ ಕಠಿಣ ಮಾತುಗಳು ನನ್ನ ಪ್ರಾಣನಾಥರ ಹೃದಯ ಕಮಲವನ್ನು ಶೂಲದೋಪಾದಿಯಲ್ಲಿ ಚುಚ್ಚಿಬಿಟ್ಟಿತು. ಅಯ್ಯೋ, ಆ ಸಮಯದಲ್ಲಿ ತಾಳ್ಮೆಯೇ ಮೂರ್ತಿವತ್ತಾಗಿ ನಿಂತಿದ್ದ ನನ್ನ ಪ್ರಾಣವಲ್ಲಭನ ವದನವನ್ನು ಗಮನಿಸಿದ ಮಾತ್ರಕ್ಕೆ ನಾನು ಏಕೆ ಇಷ್ಟೊಂದು ತಾಳ್ಮೆ ಮೀರಿ ಕ್ರೂರವಾಗಿ ನಡೆದುಕೊಂಡೆನೆಂದು ನನ್ನ ಮನಸ್ಸು ಅವರ ಮನಸ್ಸಿಗಿಂತ ನೂರ್ಮಡಿಯಷ್ಟು ಕೊರಗಿತು ಅನಂತರವಲ್ಲಿ ಅದೆಷ್ಟೊಂದು ಪಶ್ಚಾತ್ತಾಪಗೊಂಡರೂ ಸಹ ಒಂದು ಸಲ ನುಡಿದ ಮಾತನ್ನು ಅಳಿಸಲು ಸಾಧ್ಯವೇ? ಅವರ ಹತ್ತಿರದಲ್ಲಿ ಕ್ಷಮಾಪಣೆ ಬೇಡಲು ಸಹ ಹೆದರಿ ...ಅಲ್ಲ....ನಾಚಿಕೆಗೊಂಡು ಮೌನವಾಗಿ ಅಡಿಗೆಯ ಮನೆಯೊಳಗೆ ಹೊರಟುಹೋದೆ.

ಮರುನಿಮಿಷ ನಾನು ತಂದುಕೊಟ್ಟ ಕಾಫಿಯನ್ನು ನನ್ನ ಪ್ರಾಣೇಶ್ವರನು ಮೌನವಾಗಿ ಕುಡಿದು "ನಾನು ಹೊರಗೆ ಹೋಗಿ ಬರಬೇಕು, ಬಾಗಿಲು ಮುಚ್ಚಿಕೋ" ಎಂದು ನುಡಿದ ಪ್ರತಿಯೊಂದು ಮಾತಿನಲ್ಲಿಯೂ ನನ್ನ ಕಠೋರ ವಚನದಿಂದ ಅವರಿಗುಂಟಾದ ವ್ಯಸನವೂ, ಅಪಮಾನವೂ ಪ್ರತಿಫಲಿಸುತ್ತಲಿದ್ದಿತು. ನಾನು "ಎಲ್ಲಿಗೆ ಹೋಗುತ್ತೀರಿ?" ಎಂದು ಸಹ ಕೇಳಲು ಬಾಯಿ ಬರದೆ ಮೂಕಳಂತೆ ನಿಂತಲ್ಲಿಯೇ ನಿಂತಿದ್ದೆ. ಅವರು ನನ್ನ ಹತ್ತಿರದಲ್ಲಿ 'ಇಲ್ಲಿಗೆ ಹೋಗಿ ಬರುತ್ತೇನೆಂ'ದು ತಿಳಿಸದೆ ಎಂದಿಗೂ ಹೊರಗೆ ಹೋದವರಲ್ಲ. ಎಲ್ಲಿಗೆ ಹೋಗುತ್ತಾರೆ? ಯಾವುದಕ್ಕಾಗಿ ಹೋಗುತ್ತಾರೆ? ಅಕಸ್ಮಾತ್ತಾಗಿ ಈಗ ಎಲ್ಲಿಗೆ ಹೇಳದೆ ಹೊರಟಿರುವರು? ಒಂದು............ ........ವೇಳೆ.........ನನ್ನ ಮುಖವನ್ನು ಕಾಣಲು ಜುಗುಪ್ಸೆಗೊಂಡು ಹೊರಗೆ ಹೊರಟು ಹೋದರೋ? ಕಾಣೆನಲ್ಲಾ"......ಎಂದು ಹಲವು ಬಗೆಗಳಲ್ಲಿ ಯೋಚಿಸಿದವಳಾಗಿ ಪರಿತಪಿಸಿದೆ.

ಘಂಟೆ ಏಳು ಹೊಡೆಯಿತು. ಅವರು ಬರುವ ಜೋಡಿನ ಶಬ್ದವು ಬೀದಿಯ ಬಾಗಿಲಲ್ಲಿ ಕೇಳಬಂದಿತು ಐದಾರು ವರ್ಷಗಳ ಹಿಂದೆ ವಿಲಾಯಿತಿಗೆ ತೆರಳಿದ್ದ ನಾಥನು ಜನ್ಮ ದೇಶಕ್ಕೆ ಹಿಂತಿರುಗಿ ತನ್ನ ಮನೆಯನ್ನು

ಹೊಕ್ಕಾಗ, ಅಷ್ಟೊಂದು ವರ್ಷಗಳ ಕಾಲ ತನ್ನ ಪ್ರಾಣವಲ್ಲಭನ ಆಗಮನವನ್ನು ಕಾತುರತೆಯೊಡನೆಯೂ, ಆಶೆಯೊಡನೆಯೂ, ನಿರೀಕ್ಷಿಸುತ್ತಲಿದ್ದ ಮಡದಿಗೂ ಸಹ ನಾನು ಆಗ ಹೊಂದಿದ ಮಹದಾನಂದ ಏರ್ಪಟ್ಟಿರಲಾರದು. ನಯ ವಿನಯ ಭಯಗಳಿಂದ ಕೂಡಿದವಳಾಗಿ ಸಂತೋಷದೊಡನೆ ಕದವನ್ನು ತೆರೆದೆ. ನನ್ನ ದೇಹಾದ್ಯಂತವೂ ರೋಮಾಂಚನ ಉಂಟಾಯಿತು. ದೇಹವೆಲ್ಲವೂ ಬೆವರಿ, ನಡುಗಲಾರಂಭಿಸಿತು.

"ಚಾರುಮತೀ! ಇಕೋ! ಪೊಟ್ಟಣವನ್ನು ಬಿಚ್ಚಿ, ಇದರಲ್ಲೇನಿದೆ ಯೆಂದು ಸ್ವಲ್ಪ ನೋಡು!" ಎಂದು ಪ್ರೇಮ ಪೂರ್ವಕವಾಗಿ ನುಡಿಯುತ್ತಾ ಒಂದು ಪೊಟ್ಟಣವನ್ನು ನನ್ನ ಕೈಯಲ್ಲಿತ್ತು, ಕುರ್ಚಿಯೊಂದರಲ್ಲಿ ಒರಗಿ ಕೊಂಡರು ಅವರು.

ನಾನು ಕಾತುರತೆಯೊಡನೆ ಪೊಟ್ಟಣವನ್ನು ತೆಗೆದುಕೊಂಡು "ಏನಿರ ಬಹುದು? ಎಲ್ಲೆಲ್ಲಿ ಅಲೆದುಬಿಟ್ಟು ಬಂದಿರಿ? ಮೈ ಪೂರ್ತಿ ಬೆವರುತ್ತ ಲಿದೆಯಲ್ಲಾ" ಎಂದು ಹೇಳುತ್ತಾ 'ಸ್ಟ್ಯಾಂಡಿ'ನಿಂದ ಚೌಕವೊಂದನ್ನು ತಂದು ಅವರ ಹಣೆಯನ್ನು ಒರೆಸಲು ಹೋದೆ.

ಅವರು ನನ್ನ ಕೈಯಲ್ಲಿದ್ದ ಚೌಕವನ್ನು ಕಿತ್ತುಕೊಂಡು "ನಾನೆಲ್ಲಾ ಮುಖ ಒರಸಿಕೊಳ್ಳುತ್ತೇನೆ. ನೀನು ಮೊದಲು ಪೊಟ್ಟಣವನ್ನು ಬಿಚ್ಚಿ ನೋಡು" ಎಂದರು.

ಅವರು ಹೇಳಿದಂತೆ ಪೊಟ್ಟಣವನ್ನು ಬಿಚ್ಚಿದೆ, ನಾನು ಬಹಳ ದಿವಸ ಗಳಿಂದ ಆಶೆಯಿಂದ ಕೇಳುತ್ತಲಿದ್ದ ಮೇಘ ವರ್ಣದ ಜರತಾರೀ ಸೀರೆ ಯೊಂದೂ, ಅದಕ್ಕೆ ಒಪ್ಪುವ Ready made silk 'ಜಾಕೆಟ್' ಒಂದೂ ದೃಶ್ಯವಿತ್ತವು. ನನ್ನ ಕಣ್ಣುಗಳನ್ನು ನಾನು ನಂಬಲಾರದೇ ಹೋದೆ." "ಎಲ್ಲಿಯದು....ಯಾರಿಗೆ?" ಎಂದು ತಡವರಿಸಿ ತಡವರಿಸಿ ಪ್ರಶ್ನಿಸಿದೆ.

"ನಿನಗೇ ಚಾರೂ? ಚೆನ್ನಾಗಿದೆಯೇ? ಬೈಸಿಕಲ್ ಕೊಂಡು ಕೊಳ್ಳಬೇಕೆಂದು ತಿಂಗಳಿಗೆ ಒಂದು ರೂಪಾಯಿಯಂತೆ ಕೂಡಿಸುತ್ತಿದ್ದೆನ ಲ್ಲವೇ? ಆ ಹಣವು ನನ್ನ ಕೈಯಲ್ಲಿದ್ದಲ್ಲಿ ಖರ್ಚಾಗಿಬಿಡುವುದೆಂದು ನನ್ನ ಸ್ನೇಹಿತ ಮಾಧುವಿನ ಹತ್ತಿರದಲ್ಲಿ ಕೊಟ್ಟಿಟ್ಟಿದ್ದೆ. ಅವನ ಮನೆಗೆ ಹೋದೆ.

ಅವನಿರಲಿಲ್ಲ. ಎಲ್ಲೆಲ್ಲಿಯೋ ಅಲೆದಾಡಿ ಕೊನೆಗೆ ಕಂಡು ಹಿಡಿದೆ. ಅವನಿಂದ ಆ ಹಣವನ್ನು ಕೇಳಿ ತೆಗೆದುಕೊಂಡು ಟೌನಿಗೆ ಹೋಗಿ ಅಂಗಡಿ ಅಂಗಡಿಯಾಗಿ ತಿರುಗಿ ಇವನ್ನು ಕೊಂಡು ತಂದೆ..........."

ಅವರು ಇಷ್ಟೊಂದು ಶ್ರಮಪಟ್ಟಿದುದನ್ನು ಕೇಳಿ ನನ್ನ ಮನಸ್ಸು ಪರಿತಪಿಸಿತು. ಆದರೆ ಸೀರೆಯನ್ನು ಕಂಡು ನನ್ನ ಮನವು ಪುಳಕಿತ ಹೊಂದಿತು.

ಅವರು "ಅದೇನನ್ನು ಚಿಂತಿಸುತ್ತಲಿರುವೆ ಚಾರೂ ಬೇಗನೆ ಸೀರೆ ಯನ್ನು ಉಟ್ಟುಕೊಂಡು ಬಾ ನೋಡೋಣ" ಎನಲು, ಓಡಿಹೋಗಿ ಹೊಸ ಸೀರೆಯನ್ನು ಉಟ್ಟುಕೊಂಡು ಬಂದೆ. ಇಬ್ಬರೂ ಆನಂದಸಾಗರದಲ್ಲಿ ತೇಲಾ ಡಿದೆವು.

ಅವರು "ನಾಳೆಯ ದಿನ ಮಂಜುಳೆಯ ಹತ್ತಿರದಿಂದ ವಜ್ರದ ಓಲೆಗ ಳನ್ನು ಸಾಲ ತೆಗೆದುಕೊಂಡು ಬಾ. ಅರಿಸಿನ ಕುಂಕುಮಕ್ಕೆ ಹೋಗುವ ಯೋಚನೆ ಇದೆಯೋ ಇಲ್ಲವೋ" ಎಂದು ಪ್ರೇಮಪೂರಿತವಾದ ಅತಿ ಮನೋಹರವಾದ ನೋಟವನ್ನು ಬೀರುತ್ತಾ ಕಿವಿಗಿಂಪಾಗಿ ನುಡಿದರು. ನಾನೂ ಆಗಲೆಂದು ತಲೆಯಲ್ಲಾಡಿಸಿ ನನ್ನ ಸಂತೋಷದಿಂದೊಡಗೂಡಿದ ಪೂರ್ಣ ಸಮ್ಮತವನ್ನು ತಿಳಿಸಿದೆ.

ಮಂಜುಳೆಯ ಹತ್ತಿರದಲ್ಲಿ ಯಾವಾಗಲೂ ಎರಡು ಜೊತೆಗಳು (set) ಒಡವೆಗಳುಂಟು. ಒಂದು 'ಸೆಟ್ಟ'ನ್ನು ತಾನು ಧರಿಸಿರುತ್ತಿದ್ದಳು. ಮತ್ತೊಂದನ್ನು ಸಾಲ ಕೇಳುವವರಿಗೆ ಕೊಡುತ್ತಿದ್ದಳು. ಆ ರಸ್ತೆಯಲ್ಲಿ ಯಾರ ಮನೆಯಲ್ಲಿ ಮದುವೆ ಮುಂತಾದ ವಿಶೇಷಗಳು ಜರುಗಲಿ, ಮಂಜುಳೆಯ ಆಭರಣಗಳು ಹಸೆಯ ಮೇಲೆ ಕುಳಿತಿರುವ ಹುಡುಗಿಯ ಮೈ ಮೇಲೆ ಅಲಂಕೃ ತವಾಗಿರುವುದು. ನಾನು ಮರುದಿನ ಅವಳ ಮನೆಗೆ ಹೋಗಿ ಕೇಳಿದೊಡ ನೆಯೇ ಸ್ವಲ್ಪವೂ ಹಿಂದು ಮುಂದು ನೋಡದೆ ತಕ್ಷಣವೇ ಬೆಂಡೋಲೆಗಳನ್ನು ಕೊಟ್ಟುಬಿಟ್ಟಳು.

ಬೆಂಡೋಲೆಗಳನ್ನೂ, ಹೊಸ ಸೀರೆ, ಕುಪ್ಪಸಗಳನ್ನೂ ಧರಿಸಿಕೊಂಡು ನಾನು ಅರಿಸಿನ ಕುಂಕುಮಕ್ಕೆ ಹೊರಡಲನುವಾಗಿ ನಿಂತಿರಲು ನನ್ನ ನಾಥರು

"ಚಾರೂ! ನಿಜವಾಗಿಯೂ ನೀನು ರತಿದೇವಿಯೇ ಹೌದು! ನಿನಗೆ ಒಡ ವೆಗಳು ಬಹು ಚೆನ್ನಾಗಿ ಒಪ್ಪುತ್ತವೆ!" ಎಂದು ಹೊಗಳಲು, ಅಲಂಕಾರ ಪ್ರಿಯೆಯಾದ ನನ್ನ ಮೈ ಉಬ್ಬಿತೆಂದರೆ ಸಂದೇಹವೇನೂ ಇಲ್ಲವಷ್ಟೆ. "Bಂಜತ" ಮನೆಗೆ ಹೋಗಿ ಸಂತೋಷವಾಗಿ ಕಾಲ ಕಳೆದುಬಿಟ್ಟು ಬಂದೆನು.

ಗಾಡಿಯಿಂದ ಇಳಿದು ಬಂದವಳು, ಹೊಸ ಸೀರೆಯನ್ನು ಬದಲಾಯಿ ಸುವುದಕ್ಕೆ ಮುಂಚಿತವಾಗಿ ನನ್ನ ಪ್ರತಿ ಬಿಂಬವನ್ನು ನೋಡಲು ಕನ್ನಡಿಯ ಮುಂದೆಹೋಗಿ ನಿಂತೆನು. ಹಾ! ನನ್ನ ಎಡಗಿವಿಯ ಬೆಂಡೋಲೆಯೇ ಕಾಣ ಲಿಲ್ಲ. ತಟ್ಟನೆ ಕಿರಿಚಿಬಿಟ್ಟೆ. "ಏನು? ಏನು?" ಎಂದು ಕೇಳುತ್ತಾ ನಡುಮನೆ ಯಿಂದ ಅವರು ನಾನಿದ್ದ ಚಿಕ್ಕಮನೆಯೊಳಗೆ ಓಡಿಬಂದರು. ವಿಷಯವನ್ನು ಕೇಳಿ ತಿಳಿದವರಾಗಿ ಆದೇ ತಾನೇ ನಾನು ಬಂದಿಳಿದ ಜಟಕಾ ಗಾಡಿಯಲ್ಲಿ ಬಿದ್ದಿರಬಹುದೆಂದು ಹೇಳುತ್ತಾ ಬೀದಿಯ ಕಡೆಗೆ ಓಡಿದರು. ಜಟಕಾ ಗಾಡಿಯು ಕಣ್ಣಿಗೆ ಎಟುಕದಂತಹ ದೂರದಲ್ಲಿ ಓಡಿಹೋಗಿಬಿಟ್ಟದ್ದಿತು. ಮದ ರಾಸಿನಲ್ಲಿ ಇಂತಹ ಸಾವಿರಾರು ಗಾಡಿಗಳಿವೆ. ಇದನ್ನು ಕಂಡುಹಿಡಿಯುವುದು ಹೇಗೆ. ಬೆಂಡೋಲೆಯನ್ನು ಕಂಡುಹಿಡಿಯಲು ನಾವು ಮಾಡಿದ ಸರ್ವ ಪ್ರಯತ್ನಗಳೂ ನಿಷ್ಪ್ರಯೋಜನವಾಯಿತು. ಮಂಜುಳೆಯು ಮಡುಗಿ ಕೊಟ್ಟಿದ್ದ ಬೆಂಡೋಲೆಯ ಪೆಟ್ಟಿಗೆಯ ಒಳಭಾಗದಲ್ಲಿ ಮುಚ್ಚಳದ ಮೇಲೆ "ಬೆಲೆ ೨೫೦೦ ರೂಗಳು" ಎಂದು ಬರೆಯಲ್ಪಟ್ಟದ್ದಿತು.

ನಮಗೆ ಅಂಗೈಯಗಲ ಭೂಮಿಯಾಗಲಿ, ಬಿಡುಕಾಸಿನಷ್ಟು ಪಿತ್ರಾರ್ಜಿತ ಹಣವಾಗಲೀ ಏನೊಂದೂ ಇಲ್ಲ. ಅಥವಾ ನಾವು ಹಣ ಕೂಡಿಸಿಡಲು ನನ್ನ ಪತಿಗೆ ಕೈತುಂಬ ಹಣವೇನಾದರೂ ಬರುತ್ತದೆಯೇ? ಒಂದೂ ಇಲ್ಲ. ನನ್ನ ಈ ದೊಡ್ಡ ತಪ್ಪಿತಕ್ಕೆ ಸಹ ನನ್ನನ್ನು ಕಂಡಹಾಗೆ ಬೈಯ್ಯದೆ ಕೋಪ ದಲ್ಲಿ ಒಂದೆರಡು ಸಣ್ಣ ಮಾತುಗಳನ್ನು ಅಂದು, ಅಷ್ಟಕ್ಕೇ ನಮ್ಮ ದುರದೃಷ್ಟದ ಪರಿಣಾಮವೆಂದು ಸುಮ್ಮನಿದ್ದುಬಿಟ್ಟರು, ಆ ಮಹಾತ್ಮರು! ಬೆಂಡೋಲೆಯು ಹಾಳಾದಂದಿನಿಂದ ನನ್ನ ಒಡವೆಯ ಆಸೆಯು ಮಾಯವಾಗಿ ಹೋಯಿತು. ಆದರೆ ನಾವು ಈ ದೊಡ್ಡ ಸಾಲವನ್ನು ತೀರಿಸುವ ಬಗೆ ಹೇಗೆಂಬ ಚಿಂತೆಯು ಹಗಲಿರಳೆನ್ನದೆ ಸದಾಕಾಲವೂ ಅಂಧಕಾರಂದತೆ ನಮ್ಮನ್ನು ಎಡೆಬಿಡದೆ ಸುಳಿ ಯುತ್ತಲಿದ್ದಿತು. ಅವರು ಯಾರು ಯಾರನ್ನೋ ಅಂಗಲಾಚಿ ಬೇಡಿ ೧೫೦೦

ರೂಗಳನ್ನು ಸಾಲ ತೆಗೆದುಕೊಂಡು ಬಂದು ಹೊಸದಾಗಿ ಒಂದು ಬೆಂಡೋಲೆ
ಯನ್ನು ಕೊಂಡು ತಂದರು. ಅದನ್ನು ತೆಗೆದುಕೊಂಡುಹೋಗಿ ಮಂಜು
ಳೆಯ ಹತ್ತಿರದಲ್ಲಿ ಕೊಡುವ ಹೊತ್ತಿಗೆ ಹದಿನೈದು ದಿವಸಗಳಾಗಿತ್ತು.
"ಹಿಂದಿರುಗಿ ಕೊಡಲು ಎಷ್ಟೊಂದು ಸಾವಕಾಶಮಾಡಿಬಿಟ್ಟೆ!" ಎಂಬ
ಮಂಜುಳೆಯ ಮಾತು ಒಂದನ್ನು ಕೇಳುವುದಕ್ಕೇ ನನ್ನ ಮನಸ್ಸು ಸಹಿಸಳಸ
ದಳವಾದ ಯಾತನೆಯನ್ನು ಹೊಂದಿತು. ನನ್ನ ತಪ್ಪಿತಕ್ಕಾಗಿ ಅಷ್ಟೊಂದು
ಹಣವನ್ನು ಸಾಲತಂದ ಅವರ ಮನಸ್ಸು ಸಾಲಗಾರರ ಕಡುನುಡಿಗಳನ್ನು
ಕೇಳಿ ಅದೆಷ್ಟೊಂದು ಯಾತನೆಗೊಂಡಿರಬೇಕೆಂದು ಚಿಂತಿಸಿ ಕೊರಗಿದೆನು.
ಕುಟುಂಬದ ಖರ್ಚನ್ನು ಬಹಳವಾಗಿ ಕಡಿಮೆ ಮಾಡಿ, ಪಡಬಾರದ ಕಷ್ಟಗಳೆಲ್ಲ
ವನ್ನೂ ಅನುಭವಿಸಿ ನಾಲ್ಕು ವರ್ಷಗಳಲ್ಲಿ ಸಾಲವನ್ನು ತೀರಿಸಿದೆವು.

ಅವರಂತೂ ಅದೇ ಚಿಂತೆಯಲ್ಲಿ ಕೊರಗಿ ಕೊರಗಿ ಬಹಳವಾಗಿ ಕೃಶ
ಹೊಂದಿದರು. ನನ್ನ ಪಾಡನ್ನು ಕೇಳಬೇಕೆ? ಈ ಮಧ್ಯೆ ಮಂಜುಳೆಯ
ಗಂಡನಿಗೆ ಬೇರೆ ಊರಿಗೆ ವರ್ಗವಾಗಿಬಿಟ್ಟಿತು.

* * * *

ಒಂದು ದಿವಸ ಸಂಜೆ ನಾವಿಬ್ಬರೂ ನಮ್ಮ ಮಗುವಾದ ಚಂದ್ರಶೇಖರ
ನೊಡನೆ "ಬೀಚಿಗೆ" (Beach)ಗೆ ಗಾಳೀ ಸೇವನೆಗಾಗಿ ಹೋಗಿದ್ದೆವು.
ಅವರು ಮಗುವನ್ನೂ ಎತ್ತಿಕೊಂಡು ತಮ್ಮ ಸ್ನೇಹಿತರೊಬ್ಬರೊಡನೆ ಮಾತಾ
ಡುತ್ತಾ ಸ್ವಲ್ಪದೂರ ತಿರುಗಾಡಿಕೊಂಡು ಬರಲು ದೂರ ಹೊರಟುಹೋದರು.
ನಾನುಮಟ್ಟಿಗೆ ಸಮುದ್ರದ ಅಲೆಗಳನ್ನು ಗಮನಿಸುತ್ತ ಮರಳಲ್ಲಿ ಏಕಾಂತವಾಗಿ
ಕುಳಿತಿದ್ದೆನು. ಆ ಅಲೆಗಳು ಪುನಃ ಪುನಃ ದಡದಲ್ಲಿ ಬಂದು ಬಡಿಯುತ್ತಿರುವಂತೆ
ನಮ್ಮ ಬದುಕಿನಲ್ಲಿಯೂ ಕಷ್ಟಸುಖಗಳು ಮರಳಿ ಮರಳಿ ಬದಲಾವಣೆ ಹೊಂದು
ತ್ತದೆಯೆಂದು ಚಿಂತಿಸುತ್ತಲಿದ್ದೆ. ಆಗ ನನ್ನ ಹಿಂಭಾಗದಲ್ಲಿ ಮಾತುಗಳ
ಶಬ್ದವು ಕೇಳಿಬರಲು ಯಾರೆಂದು ಹಿಂದಿರುಗಿ ನೋಡಲಾಗಿ ಶ್ರೀಮಂತ
ರಮಣಿಯೋರ್ವಳು ಎರಡು ಕೈಗಳಲ್ಲಿಯೂ ಈರ್ವರು ಮಕ್ಕಳ ಕೈಗಳನ್ನು
ಹಿಡಿದುಕೊಂಡು, ಅವರೊಡನೆ ಸಂಭಾಷಿಸುತ್ತಾ ಹೋಗುತ್ತಲಿದ್ದಳು. ಅವಳು
ನನ್ನ ಗೆಳತಿ ಮಂಜುಳೆ!

ಇದೆಂತಹ ಆಶ್ಚರ್ಯ! ನನ್ನನ್ನು ನೋಡಿಯೂ ಸಹ ನೋಡದವಳಂತೆ ನನ್ನನ್ನೂ ದಾಟಿಕೊಂಡು ಹೋಗುತ್ತಲಿದ್ದಳು.

ನನ್ನಿಂದ ಸುಮ್ಮನಿರಲು ಆಗಲಿಲ್ಲ. "ಮಂಜುಳಾ........ಮಂಜುಳಾ" ಎಂದು ಕೂಗಿಯೇಬಿಟ್ಟೆ.

ಮಂಜುಳೆ ಹಿಂದಿರುಗಿ ನನ್ನನ್ನು ದುರದುರನೆ ನೋಡುತ್ತಾ "ನನ್ನನ್ನು ಹೆಸರಿಡಿದು ಕರೆಯಲು ನೀನಾರು?" ಎಂದು ಅಧಿಕಾರಧ್ವನಿಯಲ್ಲಿ ಕೇಳಿದಳು.

"ಮಂಜುಳಾ! ನಾನು ಯಾರೆಂದು ನಿನಗೆ ತಿಳಿಯಲಿಲ್ಲವೇ? ನಿನ್ನ ಗೆಳತಿ ಚಾರುಮತಿಯಲ್ಲವೇ ನಾನು" ಎಂದು ಗದ್ಗದ ಸ್ವರದಲ್ಲಿ ನುಡಿದೆ. ದುಃಖವು ನನ್ನ ಗಂಟಲನ್ನು ಬಿಗಿಯಿತು.

ಅದರೊಳಗೆ ಅವಳೂ ನನ್ನ ಗುರುತನ್ನು ಕಂಡುಹಿಡಿದವಳಾಗಿ ನನ್ನ ಹತ್ತಿರ ಬಂದು ಕುಳಿತು, ನನ್ನ ಕೈಗಳನ್ನು ಪ್ರೀತ್ಯಾದರದೊಡನೆ ಹಿಡಿದುಕೊಂಡು "ಚಾರೂ! ನೀನ್ಯಾಕೆ ಇಷ್ಟೊಂದು ಬಡವಳಾಗಿಬಿಟ್ಟಿರುವೆಕಣೇ? ಆದೇ ನನಗೆ ಗುರುತು ತಕ್ಷಣ ಸಿಗಲಿಲ್ಲ? ಏನೇ ಸಂಗತಿ? ಹೇಳೆ." ಎಂದಳು ನಾನು ಎಲ್ಲವೂ ನಿನ್ನ ಬೆಂಡೋಲೆಯ ಪರಿಣಾಮವೇ" ಎಂದೆ.

"ಯಾಕೆ ಹಾಗೆ ಹೇಳುವೆ? ನೀನು ಆವಾಗಲೇ ಅವನ್ನು ಹಿಂದಿರುಗಿ ಕೊಟ್ಟುಬಿಟ್ಟೆಯಲ್ಲಾ?"

ನಿನ್ನ ಬೆಂಡೋಲೆಯೊಂದು ನಾನು ತೊಟ್ಟಿದ್ದ ದಿವಸವೆ ಹಾಳಾಗಿ ಹೋಯಿತು. ಎಷ್ಟು ಹುಡುಕಿಯೂ ಸಿಗಲಿಲ್ಲ. ೧೩೦೦ ರೂ. ಸಾಲ ತೆಗೆದು ಅದಕ್ಕೆ ಬದಲೊಂದು ಬೆಂಡೋಲೆಯನ್ನು ಮಾಡಿಸಿ ತಂದುಕೊಟ್ಟೆ. ಇಲ್ಲದಿದ್ದಲ್ಲಿ ಅವನ್ನು ಹಿಂದಿರುಗಿ ಕೊಡಲು ಹದಿನೈದು ದಿವಸಗಳ ಸಾವಕಾಶವೇಕೆ.''

"ಅಯ್ಯೋ ಹುಚ್ಚಿ! ಅವು ಜರ್ಮನ್ ವಜ್ರದ ಓಲೆಗಳು ಕಣೇ, ಒಂದು ಜೊತೆಗೆ ನಲವತ್ತು ರೂಪಾಯಿಗಳು ಮಾತ್ರ ಕೊಟ್ಟು ಕೊಂಡಿದ್ದೆ! ಸಾಲ ಕೊಡುವುದಕ್ಕಿಂತೇ ಒಂದು 'ಸೆಟ್' ಜರ್ಮನ್ ವಜ್ರದ ಒಡವೆಗಳನ್ನು ಕೊಂಡಿಟ್ಟಿರುವೆನು. ಬೆಲೆಯನ್ನು ಹೇಗೆ ಕಂಡುಹಿಡಿದೆ?

"ನೀನು ಓಲೆಗಳು ಮಡುಗಿ ಕೊಟ್ಟಿದ್ದ ಮಕಮಲ್ ಪೆಟ್ಟಿಗೆಯ ಮುಚ್ಚಳದ ಒಳಭಾಗದಲ್ಲಿ ೩೫೦೦ ರೂ. ಎಂದು ಬರೆಯಲ್ಪಟ್ಟಿದ್ದಿತು. ಒಂದು ಓಲೆಯನ್ನು ಮಾತ್ರ ೧೮೦೦ ರೂಗೆ ಕಡಿಮೆ ಬೆಲೆಯಲ್ಲಿ ಮಾಡಿಕೊಡಲಾರೆವೆಂದು ಎಲ್ಲ ರತ್ನ ವ್ಯಾಪಾರಿಗಳೂ ಅಂದುಬಿಟ್ಟರು. ಆ ಸಾಲವನ್ನು ತೀರಿಸಲು ನಾವು ಅನುಭವಿಸಿದ ಕಷ್ಟಗಳು ಹೇಳತೀರದು."

"ಅಯ್ಯೋ! ಈ ಪೆಟ್ಟಿಗೆ ನಾನು ತೊಟ್ಟಿರುವ ಓಲೆಯದು! ಪೆಟ್ಟಿಗೆ ಸುಮ್ಮನೆ ಬಿದ್ದಿರುವುದಲ್ಲಾ ಎಂದು ಅವನ್ನು ಅದರಲ್ಲಿ ಮಡುಗಿದ್ದೆನಷ್ಟೇ...."
ಎಂದಳು ಮಂಜುಳೆ.

---

# ಸುಧಾ

ನಮ್ಮ ಅತ್ತಿಗೆಯು ಬಂದಾರಭ್ಯ ನನಗೂ, ರಾಘುವಿಗೂ ಕುತೂಹಲವೋ ಕುತೂಹಲ. ಈ ಬೇಸಿಗೆಯ ರಜವನ್ನು ಹ್ಯಾಗಪ್ಪ ಕಳೆಯುವುದು ಎಂಬ ನಮ್ಮ ಪರ್ವತದಂತಹ ಚಿಂತೆಯು ಅತ್ತಿಗೆಯು ತೌರು ಮನೆಯಿಂದ ಬಂದೊಡನೆಯೇ ಮಂಜಿನಂತೆ ಮಾಯವಾಯಿತು. ನಮ್ಮ ಅತ್ತಿಗೆಯು ಬಹಳ ಒಳ್ಳೆಯವಳು. ನಾನು ಊಟಮಾಡುವಾಗಲೂ, ನಿದ್ರೆ ಮಾಡುವಾಗಲೂ ಒಳ್ಳೊಳ್ಳೆಯ ಕಥೆಗಳು ಹೇಳುವಳು. ನಾವಿಬ್ಬರೂ ಜಗಳವಾಡುವಾಗ ನಡುವೆ ಬಂದು ಬಹುಬೇಗನೆ ಜಗಳ ತೀರಿಸಿ ರಾಜೀ ಮಾಡಿ ಬಿಡುವಳು. ನಮ್ಮ ತಲೆ ಬಾಚಿ ಹೆಣೆದು, ಅಂದವಾಗಿ ಹೂ ಕಟ್ಟಿ, ಮುಡಿಯುವಳು. ನಮ್ಮೊಡನೆ ಕೇರಂ, ಪಗಡೆ, ಆಡುವಳು. ಅವಳು ಅಮ್ಮನಿಗೆ ಸಹಾಯವಾಗಿ ಅಡಿಗೆಯ ಮನೆಯಲ್ಲಿ ಕೆಲಸವಾಗಿದ್ದರೆ, ಆಗ ಸುಧೆ ಇರುವಳಲ್ಲಾ, ನಮ್ಮೊಡನೆ ಆಡಲಿಕ್ಕೆ! ಸುಧಾ! ಅವಳಿಗೇ ಆ ಹೆಸರು ಚೆನ್ನ! ಸುಧೆಯೆಂದರೆ ಅವಳೇ ಸುಧೆ! ಬೆಳ್ಳಗೆ ಹಾಲಿನಂತಿರುವಳು. ಅವಳೆಂದರೆ ನನಗೂ ರಾಘೂಗೂ ಪಂಚಪ್ರಾಣ. ಯಾವಾಗಲೂ ಒಬ್ಬರು ತಪ್ಪಿದರೊಬ್ಬರು ಅವಳನ್ನು ಎತ್ತಿ ಮುದ್ದಾಡುತ್ತಲಿರುವೆವು. ಅದನ್ನು ಕಂಡರೆ ಅಮ್ಮನಿಗಾಗದು. “ಹೀಗೆ ಎತ್ತಿ ಎತ್ತಿ ಹಿಸುಕಿದರೆ ಮೈ ಕೆಟ್ಟುಹೋಗುತ್ತೆ, ಕೆಳಗೆ ಬಿಡಿರೇ, ಖುಷಿಯಾಗಿ ಆಡುತ್ತಿರಲಿ” ಎನ್ನುವಳು. ನಮ್ಮ ಸಂಗಾತಿಯರನ್ನೆಲ್ಲಾ ಕರೆತಂದು ಸುಧೆಯನ್ನು ತೋರಿಸುವುದರಲ್ಲಿ ನಮಗೆ ಹೆಮ್ಮೆ, ರಾತ್ರಿ ಮಲಗಲು ಹಾಸಿಗೆ ಹಾಸಿದರೆ ಸರಿ, ಅದರ ಮೇಲೆ ಅವಳು ಕುಣಿದು ಕುಪ್ಪಳಿಸಿ ಆಟವಾಡುವ ಸೊಬಗೇ ಸೊಬಗು! ಅವಳಿಗೆ ಹಾಲೆಂದರೆ ಬಲು ಆಸೆ. ಸುಮ್ಮನೆ ಕುಡಿಸಿದರೆ ಅಜೀರ್ಣವಾದೀತೆಂದು ಅತ್ತಿಗೆಯೂ ಅಮ್ಮನೂ ರೇಗುವರು. ಆದ್ದರಿಂದ ಅವರುಗಳು ನಡುಮನೆಯಲ್ಲೋ, ತೋಟದಲ್ಲೋ ಇರುವಾಗ ಮೆಲ್ಲಗೆ, ಅವರಿಗೆ ತಿಳಿಯದಂತೆ ಹಾಲಿನ ಬೀರುವಿನಿಂದ ಹಾಲು ತಂದು ಕುಡಿಸಿ ಬಿಡುವೆವು.

ನಮ್ಮೂರಿಗೆ ಸಮೀಪದಲ್ಲಿ ವರ್ಗವಾಗಿ ಬಂದಿರುವ ಜಡ್ಜರ ಸೊಸೆ ನಮ್ಮ ಅತ್ತಿಗೆಯ ಬಾಲ್ಯ ಸ್ನೇಹಿತೆಯಂತೆ. ಒಂದೊಂದು ದಿನ ಅವಳು ನಮ್ಮ ಅತ್ತಿಗೆಯನ್ನು ನೋಡಿ ಹೋಗಲು ನಮ್ಮ ಮನೆಗೆ ಬಂದಾಗ ಅತ್ತಿಗೆ ತೌರು ಮನೆಗೆ ಹೋಗಿರುವುದನ್ನು ಕಂಡು ಅವಳು ಹಿಂದಿರುಗಿ ಬಂದ ಮೇಲೆ ತನಗೆ "Phone" ಮಾಡೆಂದು ಹೇಳಿ ಹೋಗಿದ್ದಳು. ಅದೇ ತರಹ ಅತ್ತಿಗೆ ಬಂದ ಮರುದಿನವೇ ಅತ್ತಿಗೆಯು ಸುಧೆಯೊಡನೆ ಬಂದಿರುವಳೆಂದು ಜಡ್ಜ್ ಸೊಸೆ ಕಮಲೆಗೆ "Phone" ಮಾಡಿದೆ. ಮುಂದಿನ ಶುಕ್ರವಾರ ಮಧ್ಯಾಹ್ನ ಮೂರು ಘಂಟೆಯ ಹೊತ್ತಿಗೆ ತನ್ನ ಅತ್ತೆಯವರನ್ನೂ ಕರೆದುಕೊಂಡು ನಮ್ಮ ಮನೆಗೆ ಬರುವುದಾಗಿ ಕಮಲೆಯು ತಿಳಿಸಿದಳು.

ಸರಿ, ಶುಕ್ರವಾರದ ಹಾದಿಯನ್ನೇ ನಾನೂ, ರಾಧುವೂ ಕಾಯುತ್ತಿದ್ದೆವು. ನಮ್ಮ ಸುಧೆಯನ್ನು ಅವರಿಗೆ ತೋರಿಸಬೇಕೆಂಬ ಹೆಬ್ಬಯಕೆ ನಮಗೆ. ಶುಕ್ರವಾರದ ದಿನ ಬೆಳಿಗ್ಗೆ ಮನೆಯೆಲ್ಲವನ್ನೂ ಚೊಕ್ಕಟ ಮಾಡಲಾರಂಭಿಸಿದಳು ಅತ್ತಿಗೆ. ಅವಳಿಗೆ ನಾವಿಬ್ಬರೂ ಸಹಾಯಕರಾಗಿ ನಿಂತೆವು. ಜಡ್ಜ್ ಮನೆಯವರು ಬರುತ್ತಾರೆ ಅಲ್ಲವೇ! ಅದರಲ್ಲೂ ಅತ್ತಿಗೆಯ ಬಾಲ್ಯ ಸ್ನೇಹಿತೆ ಬರುತ್ತಾಳೆ! ಶ್ರೀಮಂತ ಮನೆತನದವಳು. ನಡುಮನೆ ಪೂರ್ತಿಯೂ ಧೂಳು ಹೊಡೆದು ಗುಡಿಸಿ, ಕಿಟಕಿಯ ಕನ್ನಡಿಗಳನ್ನೂ, ದೀಪಗಳ ಬಲ್ಬುಗಳನ್ನೂ, 'ಡೂಂ'ಗಳನ್ನೂ ಒದ್ದೆಯ ಬಟ್ಟೆಯಿಂದ ಒರಸಿ, ಪರಿಶುದ್ಧ ಮಾಡಿ ನಡುಮನೆಯ ರತ್ನ ಕಂಬಳಿಯನ್ನು ಕೊಡವಿ ಹಾಸಿ ಎಲ್ಲವನ್ನೂ ಚೊಕ್ಕಟ ಮಾಡಿದುದಾಯಿತು. ಮಣ್ಣಲ್ಲಿ ಆಟವಾಡಿ ಮೈಯೆಲ್ಲ ಕೊಳೆ ಕೊಳೆಯಾಗಿ ನಿಂತಿರುವ ಸುಧೆಯನ್ನು ಹೇಗೆ ಅವರಿಗೆ ತೋರಿಸುವುದು? ಊಟ ಮುಗಿದ ಬಳಿಕ ಅಮ್ಮನೂ ಅತ್ತಿಗೆಯೂ, ಅತಿಥಿಗಳಿಗೆ ಮಧ್ಯಾಹ್ನ ಕಾಫಿಯ ಜೊತೆಗೆ ಕೊಡಲು ಭಕ್ಷ್ಯ ತಯಾರಿಸುತ್ತಲಿದ್ದರು. ನಾನೂ ರಾಧುವೂ ಸೇರಿ ಸುಧೆಯ ಮೈಯನ್ನು ಒದ್ದೆಯ ಬಟ್ಟೆಯಿಂದ ಒರಸಿ ಚೊಕ್ಕಟ ಮಾಡಿದೆವು! ಸುಧೆಯು ಆಗ ಅದೆಷ್ಟೊಂದು ಮುದ್ದಾಗಿದ್ದಳು. ಗೊತ್ತುಂಟೇ! ಅವಳನ್ನು ತಂದು ನಡುಮನೆಯ ರತ್ನ ಕಂಬಳಿಯ ಮೇಲೆ ಬಿಟ್ಟು, ಆಟವಾಡಲು ಎರಡು ಚೆಂಡನ್ನು ತಂದು ಹಾಕಿದೆನು. ಬಳಿಕ ಅವಳು ಮಣ್ಣಿಗೆ ಆಡಲು ಹೋಗ

ದಂತೆ ಜೋಪಾನವಾಗಿ ನೋಡಿಕೊಳ್ಳುವಂತೆ ರಾಧುವಿಗೆ ಹೇಳಿ, ನಾನು ನಡುಮನೆಯ ಮೇಜಿನ ಹೂ ಪಾತ್ರೆಗಳಲ್ಲಿ (Vases) ಇಡಲು ಹೂ ಕೊಯ್ದು ತರಲು ತೋಟದ ಕಡೆಗೆ ಹೊರಟೆ.

ನಾನು ತೋಟದಿಂದ ಹಿಂದಿರುಗಿ ಬರುವ ಹೊತ್ತಿಗೆ ರಾಧುವು ಸುಧೆಯನ್ನು ಕಾಣದೆ ಪೆಚ್ಚು ಪೆಚ್ಚಾಗಿ ನೋಡುತ್ತಾ ಹುಡುಕುತ್ತಲಿದ್ದಳು. "ಬಾಗಿಲುಗಳೆಲ್ಲವನ್ನೂ ಮುಚ್ಚಿಕೊಂಡು, ಅವಳನ್ನು ಎಲ್ಲೂ ಓಡಿಹೋಗದಂತೆ ನೋಡಿಕೊಳ್ಳೇ ಎಂದರೆ ಏನುಮಾಡುತ್ತಲಿದ್ದೇ'' ಎಂದು ರಾಧುವಿನ ಮೇಲೆ ರೇಗಿದೆ. "ಇಲ್ಲಕ್ಕಾ, ಆಗೋ ಆ ಕತೆ ಪುಸ್ತಕವನ್ನು ಓದುತ್ತಾ, ಹಾಗೆಯೇ ಅವಳನ್ನೂ ನೋಡಿಕೊಳ್ಳುತ್ತಲಿದ್ದೆ. ಅದು ಹ್ಯಾಗೋ ತಪ್ಪಿಸಿಕೊಂಡುಬಿಟ್ಟಿದ್ದಾಳೆ..........ಎಂದು ಬಿಕ್ಕಳಿಸಿದಳು. ಅಷ್ಟರೊಳಗಾಗಿ ಜಡ್ಜರ ಮನೆ ಮೋಟಾರು ಬಂದಿತು.

ಎಲ್ಲರೂ ಕಾಫೀ ಫಲಾಹಾರಾದಿಗಳನ್ನು ತಿಂದು, ಸಂಭಾಷಿಸುತ್ತ ಕುಳಿತಿದ್ದೆವು. ಆಗ ಕಮಲೆಯು ಅತ್ತಿಗೆಯನ್ನು "ಎಲ್ಲೇ ಮಾಲತೀ ನಿನ್ನ ಮಗಳು ಸುಧಾ? ನಿದ್ರೆಮಾಡುತ್ತಲಿರುವಳೇನು? ಇಕೋ ಇದನ್ನು ಪಾಪಚ್ಚಿಗೆ ಕೊಡು." ಎಂದು ಬೆಳ್ಳಿಯ ಗಿಲಿಗಿಲಿಯೊಂದನ್ನೂ, ಸಕ್ಕರೆ ಪೊಟ್ಟಣವನ್ನೂ ರಾಧುವಿನ ಕೈಯಲ್ಲಿತ್ತಳು. ನಾವೆಲ್ಲರೂ ಗೊಳ್ಳನೆ ನಕ್ಕೆವು.

"ಮಾಲತಿಗಿನ್ನೂ ಮಕ್ಕಳಿಲ್ಲವಲ್ಲಾ." ಅವಳ ಬೆಕ್ಕಿನ ಮರಿಗಲ್ಲವೇ "ಸುಧಾ'' ಯೆಂದು ಹೆಸರಿಟ್ಟಿರುವಳು" ಎಂದಳು ಅಮ್ಮಾ.

"ಬೆಕ್ಕಿಗೆ ಹೋಗಿ ಈ ಹೆಸರೇ? ನಾವು ಮೋಸಹೋದೆವಲ್ಲಾ" ಎಂದು ಅತ್ತೆ ಸೊಸೆಯರಿಬ್ಬರೂ ಒಟ್ಟಿಗೆ ಉಸಿರಿದರು.

ಅವಳು ಹಾಲಿನಂತೆ ಬೆಳ್ಳಗೆ ಇರುವುದರಿಂದ, ಆ ಹೆಸರಿಟ್ಟೆ'' ಎಂದಳು. ಅತ್ತಿಗೆ, ಅದೇ ಸಮಯ 'ಮಿಯಾವ್, ಮಿಯಾವ್' ಎಂದು ಕೂಗುತ್ತಾ ಇಜ್ಜಲ ಮೂಟೆಯಲ್ಲಿ ಹೊರಳಾಡಿ ಬಂದು, ನಮ್ಮ ಮುಂದೆ ಬೂದು ಬಣ್ಣದ ಬೆಕ್ಕಿನ ಮರಿಯಾಗಿ ದೃಶ್ಯವಿತ್ತಿತು ನಮ್ಮ ಸುಧೆ! ಮಧ್ಯಾಹ್ನ ನಾನೂ ರಾಧುವೂ ಅವಳಿಗೆ ಸ್ನಾನಮಾಡಿಸಿದುದೆಲ್ಲವೂ ವ್ಯರ್ಥವಾಯಿತು.

# ಅರುಣನ ವಿವಾಹ

ಸ್ನೇಹಿತನೊಬ್ಬನ ಮನೆಯಿಂದ ಆಗತಾನೇ ರೂಮಿಗೆ ಹಿಂದಿರುಗಿದ ಅರುಣನ ಕೈಯಲ್ಲಿ ಅಂಚೆಯವನು ಒಂದು ಲಕೋಟೆಯನ್ನಿತ್ತು ತೆರಳಿದನು. ಕೊಠಡಿಯ ಬಾಗಿಲನ್ನು ತೆರೆದು, ಒಳಗೆ ಹೋಗಿ ಪತ್ರವನ್ನು ಬಿಚ್ಚಿ ಓದಿದನು.

ಚಿರಂಜೀವಿ ಅರುಣನಿಗೆ ಅನೇಕ ಆಶೀರ್ವಾದಗಳು.

ಈ ದೀವಳಿಗೆಯ ಹಬ್ಬಕ್ಕಾದರೂ ನಾಲ್ಕು ದಿನಗಳು ರಜ ತೆಗೆದುಕೊಂಡು ಹಳ್ಳಿಗೆ ಬಂದು ಹೋಗು "ಮಗು ಹೋಟಲ ಊಟವನ್ನು ಮಾಡಿ ಮಾಡಿ, ಬಹಳ ಇಳಿದು ಹೋಗಿರುವುದು. ನಾಲ್ಕಾರು ದಿನಗಳು ರಜ ತೆಗೆದುಕೊಂಡು ಬರುವಂತೆ ಬರೆಯಿರಿ. ಅವನಿಗೆ ನನ್ನ ಕೈಯಾರೆ ಅಡಿಗೆ ಮಾಡಿ ಬಡಿಸಬೇಕೆಂದು ಆಸೆಯಾಗಿದೆ" ಎಂದೆಲ್ಲಾ ನಿಮ್ಮಮ್ಮನು ನನ್ನನ್ನು ಪೀಡಿಸುತ್ತಿರುವಳು. ತಕ್ಷಣ ರಜಕ್ಕೆ ಬರೆದುಹಾಕಿಬಿಡು.

ಇಂತೀ

ನಿನ್ನ ಪ್ರಿಯ ತಂದೆ ರಾಮರಾವ್,

ಅರುಣನು ಪತ್ರವನ್ನು ಮೇಜಿನ ಮೇಲೆ ಹಾಕಿ, ಪತ್ರಿಕೆಯೊಂದನ್ನು ಕೈಯಲ್ಲಿ ತೆಗೆದುಕೊಂಡು ತಿರುವಿಹಾಕುತ್ತಾ "ಅಪ್ಪಾ, ಅಮ್ಮಾಗೆ ಇನ್ನೇನು ಕೆಲಸ. ದೊಡ್ಡದಾಗಿ ದೀವಳಿಗೆಗೆ ರಜ ತೆಗೆದುಕೊಂಡು ಬಾರೆಂದು ಉಪಾಯವಾಗಿ ಬರೆಯುವುದು ; ಅಲ್ಲಿಗೆ ಹೋದರೆ ಒಂದು ಹಳ್ಳಿಗೊಗ್ಗು ಹುಡುಗಿಯನ್ನು ಗೊತ್ತುಮಾಡಿಟ್ಟುಕೊಂಡಿದ್ದು, ಅದನ್ನು ಮದುವೆಯಾಗೆಂದು ಪೀಡಿಸುವುದು. ಅದೇ ಕೆಲಸ ಅವರಿಗೆ" ಎಂದು ಮನದೊಳಗೆ ಗೊಣಗಿಕೊಂಡನು.

* * * *

ಅರುಣನಿಗೆ ರಜವಂತೂ ದೊರಕಿತು. ಅವನನ್ನು ಒಂದೂವರೆ ವರ್ಷದ ಬಳಿಕ ನೋಡಿದ ಅವನ ಮಾತಾಪಿತೃಗಳಿರ್ವರೂ ಹಿಗ್ಗಿದರು. ಮಾತೆಯು

ಪುತ್ರನಿಗೆ ಅಂದೇ ಮುಜುಗರದೊಡನೆ ಪಲ್ಯ, ಕೂಟು, ಕೋಸುಂಬರಿ, ಬಜ್ಜಿ ಎಂದು ನಾನಾತರದ ಅಡಿಗೆಗಳನ್ನು ಮಾಡಿ ಆದರೊಡನೆ ಬಡಿಸಿದಳು.

ಸಂಧ್ಯಾಕಾಲ ತಾಯಿಯು ಕೊಟ್ಟ ಫಲಾಹಾರವನ್ನು ಭುಜಿಸಿ, ಕಾಫಿ ಕುಡಿದು ಸ್ವಲ್ಪಕಾಲ ಆಡ್ಡಾಡಿಕೊಂಡು, ಬರೋಣವೆಂದು ಅರುಣನು ಹೊರಟ. ಆಗ ಅವನ ಮಾತೆಯು "ಏನೋ ಅರುಣ! ಇನ್ನೂ ಎಷ್ಟೊಂದು ಕಾಲ ಗಣೇಶನಂತೆ ಹೀಗೆ ಬ್ರಹ್ಮಚಾರಿಯಾಗಿ ಕಾಲಹರಣ ಮಾಡಬೇಕೆಂದಿರುವೆ? ನಮ್ಮ ನಾಣಿಯ ತಂಗಿಯ ಮಗಳು ದಂತದಲ್ಲಿ ಕೆತ್ತಿದ ವಿಗ್ರಹದಂತೆ ಬಹಳ ಲಕ್ಷಣವಾಗಿದ್ದಾಳೆ. ಬರುವ ವೈಶಾಖಕ್ಕೆ ಹದಿನೈದು ವರ್ಷಗಳು ತುಂಬುತ್ತವೆಯಂತೆ. ಮನೆಯ ಕೆಲಸ ಮಾಡುವುದರಲ್ಲಂತೂ ಬಲು ಜಾಣೆ. ಚೆನ್ನಾಗಿ ಹಾಡುತ್ತಾಳೆ ಕೊಂಚ ಓದು ಬರಹವೂ ಬರುತ್ತದೆಯಂತೆ ......ಎಂದು ಬೋಧಿಸುತ್ತಾ ಹೋದಳು.

"ಇರಲಿ ಅಮ್ಮಾ! ಆಮೇಲೆ ಮಾತನಾಡೋಣ" ಎಂದು ಹೇಳುತ್ತಾ ಹೊರಗೆ ಹೊರಟುಬಿಟ್ಟನು ಅರುಣ. ಆ ಹಳ್ಳಿಯು ಒಂದು ತಂಪಾದ ಸ್ಥಳ. ನಗರವಾಸದ ಬೇಗೆಯಲ್ಲಿ ಬೆಂದವರಿಗೆ ಪ್ರಾಕೃತಿಕ ಸೌಂದರ್ಯದಿಂದ ಪರಿಪೂರ್ಣವಾಗಿ ಬೆಳಗುತ್ತಿದ್ದ ಆ ಗ್ರಾಮದಲ್ಲಿ ಆಡ್ಡಾಗಿ ಬರಬೇಕೆಂದರೆ ಬಲು ಆಸೆ ಹಲವು ಪುಣ್ಯ ಪುರುಷರು ಸುಖ ವಾಸಸ್ಥಳಕ್ಕಾಗಿಯೂ ವಿರಾಮಕ್ಕಾಗಿಯೂ ಈ ಹಳ್ಳಿಯಲ್ಲಿ ಬಂದು ಮುಖಾಂ ಹಾಕುತ್ತಲಿದ್ದರು. ಅರುಣನು ಸ್ವಲ್ಪ ಕಾಲ ಆಡ್ಡಾಡಿದನಂತರ ನದಿಯ ದಡದಲ್ಲಿ, ಮರಳಿನ ಮೇಲೆ, ಒಂದು ಮರದ ನೆರಳಿನಲ್ಲಿ ಕುಳಿತು ಸುಖವಾಗಿ ಬೀಸುವ ತಣ್ಣನೆಯ ಗಾಳಿಯನ್ನು ಸೇವಿಸುತ್ತಾ ಪ್ರಕೃತಿ ದೇವಿಯ ಸೌಂದರ್ಯವನ್ನು ಪಾನಮಾಡುತ್ತಲಿದ್ದನು ಆ ಸಮಯದಲ್ಲಿ ಆ ಗ್ರಾಮಕ್ಕೆ ಈಚೆಗೆ ವಿರಾಮಕ್ಕೋಸ್ಕರವಾಗಿ ಬಂದಿರುವ ರಿಟೈರ್ಡ್ ಡೆಪ್ಯುಟೀಕಮಿಷನರ್ ಕೃಷ್ಣರಾಯರೂ ಅವರೊಡನೆ ಓರ್ವ ನವಯುವತಿಯೂ ಬಂದರು. ಅವರುಗಳು ನಗರವಾಸಿಗಳಾದುದರಿಂದ ಸಂಜೆಯ ಸಮಯ ಗಾಳೀ ಸೇವನೆಗೆ ಹೊರಟಿರುವರು. ಆ ತರುಣಿಗೆ ಸುಮಾರು ಹದಿನೇಳು ವರ್ಷ ವಯಸ್ಸಿರಬಹುದು. ನೈಜವಾಗಿಯೇ ಲಾವಣ್ಯಮಯಿಯಾದ ತರುಣಿಯು ಅಸ್ತಂಗತನಾಗುವ ಸೂರ್ಯನ ಸ್ವರ್ಣ ಕಿರಣಗಳಲ್ಲಿ

ಸಾಕ್ಷಾತ್ ಸ್ವರ್ಗ ಪ್ರತಿಮೆಯೋಪಾದಿಯಲ್ಲಿ ಬೆಳಗುತ್ತಲಿದ್ದಳು" ಇವಳಲ್ಲವೇ ಸೌಂದರ್ಯ ದ್ಯುತಿ!" ಎಂದು ಅಂದುಕೊಂಡನು ಅರುಣ ಅವರುಗಳು ಅವನನ್ನು ದಾಟಿಕೊಂಡು ಸ್ವಲ್ಪ ಧೂರ ಹೋದಬಳಿಕ ವೃದ್ಧರು "ಚಂದ್ರು! ಆ ಹುಡುಗಿ ಯಾರು ಗೊತ್ತುಂಟೇ? ನಮ್ಮ ರಾಮರಾಯರ ಮಗಳು, ಮದರಾಸಿನಲ್ಲಿ ಒಂದು ಬ್ಯಾಂಕಿನಲ್ಲಿ ಇನ್ನೂರು ರೂಪಾಯಿ ಸಂಬಳದ ಉದ್ಯೋಗ ಒಂದರಲ್ಲಿದ್ದಾಳಂತೆ" ಎಂದು ಹೇಳಿದ್ದು ಅರುಣನ ಕಿವಿಗೆ ಬಿದ್ದಿತು. ಕೂಡಲೇ ತರುಣಿಯು ಹಿಂದಿರುಗಿ ಕ್ಷಣಕಾಲ ಅರುಣನನ್ನು ದುರುಗುಟ್ಟಿ ನೋಡಿದಳು. ಆ ನೋಟದಲ್ಲಿಯೂ ಸಹ ಅವಳು ಅತ್ಯಂತ ಸುಂದರಿಯಾಗಿಯೇ ಕಂಡಳು.

ಮನೆಯನ್ನು ಪ್ರವೇಶಿಸುತ್ತಲೇ ಅರುಣನ ತಾಯಿಯು "ಬಾರೋ, ಮಗು! ಹುಡುಗಿಯನ್ನು ನೋಡಿಕೊಂಡು ಬರೋಣ. ಅವಳನ್ನು ನೀನು ಒಂದು ಸಲ ನೋಡಿಬಿಟ್ಟರೆ ಸಾಕು. ಖಂಡಿತ ಅವಳನ್ನು ಮದುವೆಯಾಗಲು ಒಪ್ಪದಿರಲಾರೆ ........" ಎಂದು ಮಾತಿನ ಸರಣಿಯನ್ನು ಜೋಡಿಸಲು ತೊಡಗಿದಳು.

ಅರುಣನು ಜಿಜ್ಞಾಸೆಯೊಡನೆ "ಯಾರದಮ್ಮಾ ಅದು? ಯಾವ ಹುಡುಗಿಯಮ್ಮಾ?" ಎಂದು ಕೇಳಿದನು.

"ಅದೇ, ನಿನ್ನೆ ನಿನಗೆ ಹೇಳಿದೆನಲ್ಲೋ. ನಾಣಿಯ ತಂಗಿಯ ಮಗಳಂತೆ, ಮಗಳೂ ಅವಳ ತಾಯಿಯೂ ನಾಣಿಯ ಮನೆಗೆ ಬಂದಿದ್ದಾರೆ........"

"ನಾಣಿಯ ತಂಗಿಯ ಸವತಿ ಮಗಳೆಂದು ಹೇಳು" ಎಂದು ತಿದ್ದಿದರು ರಾಯರು.

"ಓಹೋ! Plot ಎಲ್ಲವನ್ನೂ ಮುಂಚೆಯೇ ತಯಾರಿಸಿಕೊಂಡಿರುವಂತಿದೆ.... ....."

ಇಲ್ಲಿಗಿಷ್ಟರ ನಿತ್ಯ ಬ್ರಹ್ಮಚಾರಿಯಾಗಿ ಹೋಟಲಿನ ಅನ್ನವನ್ನು ಊಟ ಮಾಡಿಕೊಂಡು ಕಾಲ ತಳ್ಳುತ್ತಿರು. ಬಲು ಚೆನ್ನ! ಈ ಕಾಲದ ಹುಡುಗರೇ ಹೀಗೆ ದೊಡ್ಡವರೆಂಬ ಮರ್ಯಾದೆಯಿಲ್ಲದೆ.........."

ಅಷ್ಟರೊಳಗಾಗಿ ತಾಯಿಯು "ಹಬ್ಬ ಹುಣ್ಣಿಮೆಯ ಶುಭದಿನಗಳಲ್ಲಿ ಮಗುವಿನ ಮೇಲೆ ಏಕೆ ಕೋಪಿಸಿಕೊಳ್ಳುತ್ತೀರಿ ? ಅಗೋ ಅಂಗಿಯನ್ನು ಹಾಕಿಕೊಂಡು ಹೊರಟುಬಿಟ್ಟನು !" ಎನ್ನುತ್ತಾ ಒಳಗೆ ಹೋಗಿ ಎಲೆ, ಅಡಿಕೆ, ಅರಸಿನ, ಕುಂಕುಮ, ರವಿಕೆಯ ಕಣ ಮುಂತಾದುವನ್ನು ತಯಾರಾಗಿ ತೆಗೆದಿಟ್ಟಿದ್ದ ತಟ್ಟೆಯನ್ನು ತೆಗೆದುಕೊಂಡು ಬರಲಾಗಿ, ಮೂವ್ವರು ಹೋಗ ಬಾರದೆಂದು ಜೊತೆಗೆ ನೆರೆಮನೆಯ ಪಾರ್ವತಮ್ಮನನ್ನೂ ಕರೆದುಕೊಂಡು ನಾಣಿಯ ಮನೆಗೆ ಎಲ್ಲರೂ ಹೊರಟರು.

ನಾಣಿಯ ಮನೆಯಲ್ಲಿ ಇವರುಗಳಿಗೆ ಕಾಫೀ ಫಲಹಾರಾದಿಗಳ ಉಪ ಚರಣೆಯು ಬಹಳ ಜೋರಾಗಿ ನಡೆಯಿತು. ಸ್ವಲ್ಪ ಕಾಲ ಲೋಕಾಭಿರಾಮ ವಾಗಿ ಸಂಭಾಷಣೆ ನಡೆದಬಳಿಕ ನಾಣಿ "ಲೇ ಜಾನಕೀ ! ವಿಮಲೆಯನ್ನು ಬಂದು ಎಲ್ಲರಿಗೂ ನಮಸ್ಕರಿಸ ಹೇಳಿ. ಹೀಗೆ ಆರ್ಮೋನಿಯಂ ತಂದಿಡು ಒಂದೆರಡು ಹಾಡು ಹೇಳು" ಎಂದ. ಮರುಕ್ಷಣ ನಾಚುತ್ತಾ ಬಳುಕುತ್ತಾ ಹದಿನೈದು ವರ್ಷದ ಬಾಲೆಯೋರ್ವಳು ಬಂದು ಎಲ್ಲರಿಗೂ ನಮಸ್ಕರಿಸಿ, ಹಾರ್ಮೋನಿಯಂನ ಹತ್ತಿರ ಕುಳಿತು, ಶ್ರುತಿ ಹಾಕುತ್ತಾ ಇಂಪಾಗಿ ಎರಡು ಹಾಡುಗಳನ್ನು ಹಾಡಿದಳು. ಹುಡುಗಿಯು ಅಧಿಕ ಸುಂದರಿಯೆಂದು ಹೇಳು ವಂತಿರಲಿಲ್ಲ. ಆದರೆ ಅವಳ ಹೊಳಪಾದ ಕಣ್ಣುಗಳೂ, ಮುಗ್ಧ ಮನೋಹರ ವಾದ ನಸುನಗೆಯೂ ಎಲ್ಲರ ಮನಸ್ಸನ್ನೂ ಆಕರ್ಷಿಸಿತು ಅವಳ ಸುಂದರವಾದ ಮುಖಛಾಯೆಯು ಸುಲಭವಾಗಿ ಮರೆಯುವಂತಹದಲ್ಲ ಇನ್ನೂ ಸ್ವಲ್ಪ ಕಾಲ ನೋಡದೆ ಹೋದೆವಲ್ಲಾ ಎಂಬುವಂತಹ ಒಂದು ತರಹೆಯ ಆಕರ್ಷಣೀಯ ವಾದ ಛಾಯೆಯು ಅವಳಲ್ಲಿ ಅಡಗಿತ್ತು. ಸಾಕಷ್ಟು [illegible]ರೂ ಕೂಡ ಶಾರೀರವು ಇಂಪಾಗಿದ್ದುದರಿಂದ ಸಂಗೀತವು ಕೇಳಲು ಇಂಪಾಗಿಯೇ ಇದ್ದಿತು. ಹಾಡಿ ಮುಗಿದ ತಕ್ಷಣ ಹುಡುಗಿಯು ಎದ್ದು ಒಳಗೆ ಹೋಗಲು ಯತ್ನಿಸಿದಳು. ಅರುಣನ ತಾಯಿಯು ಎದ್ದು ಬಂದು "ಇಕೋ ಈ ತಟ್ಟೆಯನ್ನು ತೆಗೆದು. ಕೊಳ್ಳೇ ತಾಯಿ !" ಎಂದು ಹುಡುಗಿಯ ಹಣೆಗೆ ಕುಂಕುಮದ ಬೊಟ್ಟಿಟ್ಟು ತಾನು ತಂದಿದ್ದ ತಟ್ಟೆಯನ್ನು ಅವಳ ಕೈಯ್ಯಲ್ಲಿ ಕೊಡಲಾಗಿ, ನಾಚಿಕೆ ಯಿಂದ ಕೆಂದಾವರೆಯಂತೆ ಮುಖವು ಕೆಂಪೇರಲು, ವಿಮಲೆಯು ಕ್ಷಣ ಮಾತ್ರದಲ್ಲಿ ಮಿಂಚಿನಂತೆ ಒಳಗೆ ಓಡಿಹೋದಳು.

"ಮನೆಗೆ ಬಂದೊಡನೆಯೇ ಅವನ ತಾಯಿಯು ಹುಡುಗಿಯು ಮನಸ್ಸಿಗೆ ಒಪ್ಪಿತೇ?" ಎಂದು ಅರುಣನನ್ನು ವಿಚಾರಿಸಿದಳು.

ಅರುಣನು ಸುಮ್ಮನಿದ್ದನು. ಅವನ ಕಣ್ಣಮುಂದೆ ಚಂದ್ರೆಯ ನವ ನಾಗರೀಕ ರೂಪು ನಾಟ್ಯವಾಡುತ್ತಿತ್ತು.

ಅವನ ತಂದೆಯು "ಇಷ್ಟವಿದ್ದರೆ 'ಊಂ' ಎನ್ನುವುದು. ಇಲ್ಲದಿದ್ದರೆ "ಇಲ್ಲ"ವೆಂದು ತಲೆಯನ್ನಲ್ಲಾಡಿಸಿಬಿಡುವುದು. ಇದೊಂದು ಪ್ರಮಾದವಾದ ಕೆಲಸವೇನೋ?" ಎಂದರು.

ಅರುಣನು "ಇಲ್ಲಾ, ಅಪ್ಪಾ, ನಾನು ಊರಿಗೆ ಹೋಗಿ ಕಾಗದ ಬರೆಯುತ್ತೇನೆ" ಎಂದು ಹೇಳಿಬಿಟ್ಟನು. ಅವನ ಹೃದಯವನ್ನು ಸೂರೆ ಮಾಡಿದವಳು ಚಂದ್ರಳಾಗಿರುವಾಗ ಅವನು "ಊಂ" ಅನ್ನುವ ಬಗೆ ಹೇಗೆ?

"ಈ ವರ್ಷವಾದರೂ ಮಗುವಿಗೆ ಗುರುಬಲ ಕೂಡಿದೆಯೋ ಇಲ್ಲವೋ?" ಎಂದು ಗೊಣಗಿದಳು ಅವನ ಮಾತೆ.

ಅದಕ್ಕನಂತರದಲ್ಲಿ ನಾಲ್ಕು ದಿವಸಗಳೂ ಸಂಧ್ಯಾಕಾಲದಲ್ಲಿ ಅರುಣನು ಆ ನದೀ ತೀರದಲ್ಲಿ ಅದೇ ಮರದ ಕೆಳಗೆ ಹೋಗಿ ಕುಳಿತು ತನ್ನ ಸೌಂದರ್ಯ ದೇವಿಯು ತಿರುಗಾಡಲು ಬಂದಾಗ ಅವಳನ್ನು ಕಂಡಾನಂದಿಸುತ್ತಿದ್ದನು.

*       *       *       *

ಊರಿಗೆ ಹೋದ ತಕ್ಷಣ ಮೊದಲಕೆಲಸವಾಗಿ ತನಗೆ ರಿಟೈರ್ಡ್ ಡೆಪ್ಯುಟೀ ಕಮಿಾಷನರ್ ಕೃಷ್ಣರಾಯರ ಪುತ್ರಿಯಾದ ಚಂದ್ರಾನನ್ನು ನಿಶ್ಚಯ ಮಾಡಿದಲ್ಲಿ ಖಂಡಿತ ಅದೇ ತಿಂಗಳು ಮದುವೆಯಾಗುವುದಾಗಿ ತಂದೆಗೊಂದು ಪತ್ರವನ್ನು ಬರೆದುಹಾಕಿದನು.

ಎರಡು ದಿನಗಳೊಳಗಾಗಿಯೇ ಅವನ ತಂದೆಯಿಂದ ಉತ್ತರವಂತೂ ಬಂದಿತು. ಆದರದರಲ್ಲಿ "ಚಂದ್ರೆಯು ಕೃಷ್ಣರಾಯರ ಪುತ್ರಿಯಲ್ಲ. ಅವರಿಗೆ ಮಕ್ಕಳಿಲ್ಲ. ಅವರ ಮೂರನೆಯ ಪತ್ನಿಯೇ ಚಂದ್ರಳು. ಅವಳೇ ಬಾಣಾವರದ ಪೋಸ್ಟ್‌ಮಾಸ್ಟರ್ ರಘುನಾಥನ ಮಗಳು. ಅವಳನ್ನು ಕಳೆದ ವರ್ಷ ನಿನಗೆ ನೋಡಿದ್ದೆನಲ್ಲಾ. ಹುಡುಗಿಯನ್ನು ಬಂದು ನೋಡಿಕೊಂಡು

ಹೋಗು ಎಂದು ಬರೆದುದಕ್ಕೆ ಹಳ್ಳಿಯ ಹುಡುಗಿಯೆಂದು ನೋಡಲು ಸಹ ಬರುವುದಿಲ್ಲವೆಂದು ಒಂದೇ ಹಠ ಹಿಡಿದಿದ್ದಾನಲ್ಲಾ. ಈಗ ಎಷ್ಟೊಂದು ಜೋರಾಗಿದ್ದಾಳೆ. ನೋಡಿದೆಯಾ! ಬಳಿಕ ಬಡ ರಘುನಾಥನು ಅವಳನ್ನು ಈ ಮುದುಕನಿಗೆ ಕೊಟ್ಟುಬಿಟ್ಟನು ನಾವು ವರದಕ್ಷಿಣೆ ಕೇಳುವುದಿಲ್ಲವಲ್ಲ ಎಂದು ಎಲ್ಲರೂ ನಮ್ಮನ್ನು ಬಂದು ಅಂಗಲಾಚಿ ಬೇಡುತ್ತಾರೆ ಪಾಪ.

ಈಗ ವಿಮಲೆಯನ್ನೂ ನೀನು ಮದುವೆಯಾಗು[illegible] ಅವಳನ್ನು ಶಿವಮೊಗ್ಗೆಯಲ್ಲಿ ಅಮಲ್ದಾರರಾಗಿರುವ ನಾಣಿಯ ಸೋದರತ್ತೆಯ ಭಾವಮೈದುನರಾದ ವಿಠಲರಾಯರಿಗೆ ಕೊಟ್ಟು ವಿವಾಹವನ್ನು ಈ ವರ್ಷ ನಡೆಯಿಸಿಬಿಡುವುದಾಗಿ ನಿಶ್ಚಯಿಸಿಬಿಡುವರು. ವಿಠಲರಾಯರ ಪತ್ನಿಯು ನಾಲ್ಕು ಮಕ್ಕಳನ್ನು ಬಿಟ್ಟು ಇದೀಗ ಮೂರು ತಿಂಗಳ ಹಿಂದೆ ಸತ್ತುಹೋದಳು.

ವಿಮಲೆ ತಾಯಿಯಿಲ್ಲದ ತಬ್ಬಲಿ ಮಗು. ಸ್ವರ್ಣ ವಿಗ್ರಹದಂತೆ ಇದ್ದಾಳೆ. ಬಲು ಜಾಣೆ. ನನಗೂ ಅಮ್ಮನಿಗೂ ಈ ಹುಡುಗಿಯನ್ನು ಬಿಟ್ಟುಬಿಡಲು ಮನಸ್ಸೇ ಬರಲಿಲ್ಲ. ಪ್ರತಿನಿತ್ಯವೂ ನಾಣಿಯು ಬಂದು ಪೀಡಿಸುತ್ತಿರುವನು. ಎರಡರಲ್ಲೊಂದು ಉತ್ತರವನ್ನು ತಕ್ಷಣ ತಂತೀ ವರ್ತಮಾನ ಮೂಲಕ ತಿಳಿಸು'' ಎಂದು ಅವನ ತಂದೆಯು ಬರೆದಿದ್ದರು.

ಪತ್ರವು ಅರುಣನ ಕೈಯಿಂದ ಜಾರಿ ಬೀಳಲಾಗಿ "ಅಯ್ಯೋ!" ಎಂದು ತಲೆ ಹೊಡೆದುಕೊಂಡನು ಅರುಣನು. ''ಅನ್ಯಾಯವಾಗಿ ನನ್ನ ಹಠಮಾರಿತನದಿಂದ ಒಂದು ಮುದ್ದು ಗಿಣಿಯನ್ನು ಬೆಕ್ಕಿನ ಬಾಯಿಗೆ ಕೊಟ್ಟುದುದಾಯಿತು. ಮತ್ತೊಂದನ್ನೂ ಬೆಕ್ಕಿನ ಬಾಯಿಗೆ ಕೊಡುವ ಪಾತಕವು ನನಗೆ ಬೇಡಪ್ಪಾ, ಬೇಡವೇ ಬೇಡ. ವಿಮಲೆ ಕುರೂಪಿಯೇನು? ಹಳ್ಳಿಯ ಹುಡುಗಿಯಾದರೇನೀಗ? ಅಪ್ಪನು ಹೇಳುವಂತೆ ನಾಲ್ಕು ದಿವಸಗಳು ನಗರದಲ್ಲಿ ಬಂದು ಪಳಗಿದರೆ ಎಲ್ಲವನ್ನೂ ಕಲಿತುಬಿಡುತ್ತಾಳೆ. ಇದಕ್ಕೋಸ್ಕರವಾಗಿ........ಅಯ್ಯೋ ಅವಳನ್ನು ಮುದುಕನಿಗೆ ಕೊಟ್ಟ ಪಾತಕವನ್ನು........

(ತಕ್ಷಣ ವೃದ್ಧ ವಿಠಲರಾಯರ ಸಮೀಪದಲ್ಲಿ ವಿಮಲೆಯು ನಿಂತಿರುವಂತಹ ಪರಿತಾಪಕರವಾದ ದೃಶ್ಯವು ಅವನ ಮನಸ್ಸೆಂಬ ಕಣ್ಣು ಮುಂದೆ ತೋರಿತು.) ಅಯ್ಯೋ! ಬೇಡ, ಬೇಡ! ಈ ಪಾತಕವನ್ನು ಮಾಡಲಾರೆ! ಎಂದು ಬಾಯಿಬಿಟ್ಟು ಹಲುಬಿದನು ಅರುಣ.

ಅಂದಿಗೆ ಒಂದು ತಿಂಗಳಿಗೆ ನಂತರದಲ್ಲಿ ಅರುಣ ವಿಮಲರ ವಿವಾಹವು ಸಾಂಗವಾಗಿ ನೆರವೇರಿತೆಂಬುದನ್ನು ನಾವು ತಿಳಿಸಬೇಕೇ? ವಾಚಕರೇ ಊಹಿಸಿರುವರೆಂದು ನನ್ನ ನಂಬುಗೆ.

# ಆದರ್ಶ ದಂಪತಿಗಳು

ನನ್ನ ಪ್ರಿಯ ಸುವಾಸಿನಿಗೆ, ಹೊನ್ನೂರು ೩—೩—೧೯೩೯

ನಿನ್ನ ಕಾಗದ ನೋಡಿ ಬಹಳ ಸಂತೋಷವಾಯಿತು. ನಿನಗೆ ಬೆಂಗಳೂರಿನಲ್ಲಿ ಇದ್ದು ಇದ್ದು ಬೇಜಾರಾಗಿದೆ ಎಂದು ಬರೆದಿರುವೆ. ಈ ಸಲದ ಬೇಸಿಗೆಯ ರಜದಲ್ಲಿ ಸೋದರಮಾವ ನೀಲಗಿರಿಗೆ ಹೋಗುವುದಿಲ್ಲವೆಂದು ಬರೆದಿರುವೆಯಲ್ಲ. ನೀವೆಲ್ಲ ನಮ್ಮೂರಿಗೆ ಬಂದು ತಮಾಷೆಯಾಗಿ ರಜವನ್ನು ಕಳೆಯಬಾರದೇಕೆ? ಅಮ್ಮನೂ ಹಾಗೆಯೇ ಬರೆಯಲು ಹೇಳಿದಳು.

ನಮ್ಮೂರು ಹಳ್ಳಿ; ನಿಜ. ಹಳ್ಳಿ ಕೊಂಪೆಗೆ ಕರೆಯುತ್ತೀವಲ್ಲಾ ಎಂದು ನೀನು ನಗಬಹುದು. ಆದರೆ ಗ್ರಾಮದಲ್ಲಿನ ಶಾಂತ ವಾತಾವರಣ ಆರೋಗ್ಯ, ಪಟ್ಟಣದಲ್ಲಿ ನೂರರಲ್ಲಿ ಒಂದು ಭಾಗ ಸಹ ದೊರಕುವುದು ಕಷ್ಟ ಪ್ರಕೃತಿ ದೇವಿಯ ಮನೋಹರ ನೋಟ ಹೊಳೆಯ ಕನ್ನಡಿಯಂತಹ ತಿಳಿ ನೀರು, ಎಲ್ಲೆಲ್ಲೂ ಆವರಿಸಿರುವ ಆನಂದ, ಪ್ರೇಮ ನಿಮಗೂ, ಪ್ರಿಯವಾದೀತು. ಇಲ್ಲಿ ಒಂದು ತಿಂಗಳು ಇದ್ದರೂ ಸಾಕು; ಹೊಸ ಮನುಷ್ಯರಾಗಿಬಿಡುವಿರಿ.

ಸುವಾಸಿನೀ! ನಾವು ಹುಡುಗರಾಗಿದ್ದಾಗ ನೀನೂ, ಸೋದರಮಾವ ಸೋದರತ್ತೆ ಎಲ್ಲಾ ಒಂದು ಸಲ ಇಲ್ಲಿಗೆ ಬಂದಿದ್ದಿರಲ್ಲಾ ಆಗ ನಾವು ಕಪಿಲಾ ನದಿಯ ದಡದಲ್ಲಿ, ತೆಂಗಿನ ತೋಪುಗಳಲ್ಲಿ ಆಟವಾಡಿದ್ದೆಲ್ಲ ನಿನಗೆ ನೆನಪಿದೆಯೆ? ರಾಜಣ್ಣ ನಮ್ಮಿಬ್ಬರಿಗೂ, ಮರಹತ್ತಿ ಮಾವಿನಕಾಯಿ ಕಿತ್ತು ಕೊಟ್ಟದ್ದೂ, ಅವನ ಅಂಗಿಯ ಜೇಬಿನಿಂದ, ಚಾಕು ಉಪ್ಪು ಮೆಣಸಿನ ಪುಡಿ ತೆಗೆದುಕೊಟ್ಟದ್ದೂ ನಾವು ಮೂವರೂ ಕೂಡಿ, ಹೊಳೆಯ ದಡದ ಮರಳ ದಿಣ್ಣೆಯ ಮೇಲೆ ಕೂಡಿ ತಿಂದುದೂ, ನೆನಸಿಕೊಂಡರೆ ಈಗಲೂ ಸಹ ನಾಲಿಗೆಯಲ್ಲಿ ನೀರೂರುತ್ತದೆ. ಸೊಂಪಾಗಿ ಬೆಳೆದ ಬಾಳೆಯ ಗೊನೆಗಳನ್ನು ಹೊತ್ತು ನಿಂತ ರಮಣೀಯವಾದ ಬಾಳೆಯ ಮರಗಳ ನಡುವೆ, ಹೂವಿನ ತೋಪು, ತೆಂಗಿನ ತೋಪುಗಳಲ್ಲಿಯೂ, ಅದೆಷ್ಟೊಂದು ಆನಂದವಾಗಿ ಆಟವಾಡುತ್ತಿದ್ದೆವು. ಅಂಥ ಆನಂದದ ದಿನ ಮರಳಿ ಬಂದೀತೇ?

ಅಮ್ಮ ಅಪ್ಪ ನಿಮ್ಮಂಥ ನಾಗರೀಕ ಮನುಷ್ಯರನ್ನು ಈ ಗ್ರಾಮಾಂತರಕ್ಕೆ ಕರೆಯುವುದಕ್ಕೇ ಸಂಕೋಚಪಡುತ್ತಾರೆ. ನೀವು ಏನು ತಿಳಿದುಕೊಳ್ಳುವಿರೋ ಎಂದು ಹೆದರಿಕೆ. ಆದ್ದರಿಂದಲೇ ಅವರ ಬದಲು ನಾನೇ ಕಾಗದ ಬರೆದಿರುವೆನೆಂದು, ಸೋದರ ಮಾವನಿಗೂ, ಸೋದರತ್ತೆಗೂ ಹೇಳು. ಅವರಿಗೆ ನನ್ನ ನಮಸ್ಕಾರ ತಿಳಿಸು. ರಾಜಣ್ಣ ವರ್ಧಾಕ್ಕೆ ಹೋಗಿದ್ದಾನೆ.

ಇಂತಿ,

ನಿನ್ನ ಪ್ರೀತಿ ಪೂರ್ವಕವಾದ ಪ್ರತ್ಯುತ್ತರ ನಿರೀಕ್ಷಿಸುತ್ತಿರುವ ಪ್ರಿಯ ಗೆಳತಿ.

**ಕಾಮಾಕ್ಷಿ**

೨

ಪ್ರಿಯ ಕಾಮಾಕ್ಷಿಗೆ, ಬೆಂಗಳೂರು ೭—೩—೧೯೩೯

ನಿನ್ನ ಪ್ರೀತಿಪೂರ್ವಕವಾದ ಪತ್ರವನ್ನು ಓದಿ ತುಂಬಾ ಸಂತೋಷವಾಯಿತು. ಕೂಡಲೆ ಅಮ್ಮನಿಗೂ, ಅಪ್ಪನಿಗೂ ನಿನ್ನ ಕಾಗದ ಓದಿ ತೋರಿಸಿದೆ. ಅಪ್ಪನೂ ಸಹ 'ಲಲಿತಾ' ಇದೂ ಒಂದು ಒಳ್ಳೆಯ ಆಲೋಚನೆಯೆ! ಡಾಕ್ಟರು ನಿನ್ನ ಆರೋಗ್ಯಕ್ಕೆ ಕೆಲ ಕಾಲ ಹಳ್ಳಿಯಲ್ಲಿರುವುದು ಒಳ್ಳೆಯದೆಂದು ಒತ್ತಿ ಒತ್ತಿ ಹೇಳುತ್ತಿದ್ದಾರೆ. ಅಕ್ಕನಿಗೂ ನಾವು ಹೊನ್ನೂರಿಗೆ ಬರುವುದಿಲ್ಲವೆಂದು ತುಂಬಾ ಕೋಪ. ಸುವಾಸಿನಿಗೂ ಇಷ್ಟವಿದ್ದಲ್ಲಿ ನೀವಿಬ್ಬರೂ ಹೋಗಿ ಅಕ್ಕನ ಮನೆಯಲ್ಲಿ ನಾಲ್ಕು ದಿನವಿದ್ದು ಬನ್ನಿ" ಎಂದರು. ಅದನ್ನು ಕೇಳಿ ಅಮ್ಮನಿಗೂ ಸಂತೋಷವಾಯಿತು. ನಾವಿಬ್ಬರೂ ಬರುವ ಭಾನುವಾರ ಬೆಳಗ್ಗೆ ಹೊರಟು ಹೊನ್ನೂರಿಗೆ ಬರುತ್ತೇವೆ. ಈ ಸಲ ಬಿ.ಎ. (ಆನರ್ಸ್)ಗೆ ಸೇರೋಣವೆಂದಿದ್ದೇನೆ.

ರಾಜಣ್ಣ ಹೀಗೆ ಹುಚ್ಚಾಪಟ್ಟೆ ಮಾಡುತ್ತಾನೆಂದು ನಾನು ಕನಸಿನಲ್ಲೂ ಊಹಿಸಿರಲಿಲ್ಲ. ಯಂ. ಎ. ಎಲ್. ಟಿ. ಪಟ್ಟಧಾರಿ ಒಳ್ಳೆಯ ಉದ್ಯೋಗಕ್ಕೆ ಸೇರದೆ ಗ್ರಾಮಸೇವೆ ವಾರ್ಧಾ ಆಶ್ರಮ ಎಂದು ಅಲೆದಾಡುವುದು ನನಗಂತೂ ಸರಿಬೀಳಲಿಲ್ಲ.

ಕಾಮಾಕ್ಷಿ, ಒಂದು ಗುಟ್ಟು! ಅಪ್ಪ ಐ. ಸಿ. ಎಸ್., ಅಳಿಯನನ್ನು ನೋಡಿದ್ದಾರೆ. ಆದರೆ ನನಗೆ ಮಾತ್ರ ಈಗಲೇ ಮದುವೆಯಾಗಲು ಇಷ್ಟ

ವಿಲ್ಲ. ಮದುವೆಯಾಗಿ ಸ್ವತಂತ್ರವಿಲ್ಲದೆ ಬಾಳುವುದು ನನಗೆ ಸ್ವಲ್ಪವೂ ಸೇರದು. ಹೊನ್ನೂರಿಗೆ ಹೊರಟಾದರೂ, ಅಪ್ಪ ಈ ಆಲೋಚನೆ ಬಿಡುವರೋ ಏನೋ ? ಮಿಕ್ಕ ವಿಷಯ ಇದಿರಿನಲ್ಲಿ.

ಇಂತಿ,
ನಿನ್ನ ನೆಚ್ಚಿನ ಸುವಾಸಿನಿ.

೩

ತೀರ್ಥರೂಪ ಭಾವನವರಿಗೆ, ಬೆಂಗಳೂರು ೧೧—೪—೧೯೩೯

ಮಾಧುವಿನ ಸಾಷ್ಟಾಂಗ ಪ್ರಣಾಮಗಳು ಉಭಯ ಕುಶಲೋಪರಿ ಸಾಂಪ್ರತ.

ಇದುವರೆಗೂ, ಸುವಾಸಿನಿಯನ್ನು ರಾಜಾರಾಮನಿಗೆ ಕೊಡುವ ವಿಷಯ ತಮಗೆ ತಿಳಿಸಲಿಲ್ಲವೆಂದು ನಿಮಗೂ ಅಕ್ಕನಿಗೂ ಕೋಪವಿದ್ದರೂ ಇರಬಹುದು. ಆದರೆ ಇದುವರೆಗೂ, ನಮ್ಮ ಕುಟುಂಬದಲ್ಲಿ ಸ್ವಂತದಲ್ಲಿ ಸಂಬಂಧ ಬೆಳಸುವ ವಾಡಿಕೆ ಇರಲಿಲ್ಲ. ಆದುದರಿಂದ ನಾನು ಸುವಾಸಿನಿಗೆ ಬೇರನೆ ವರನನ್ನು ಹುಡುಕುತ್ತಿದ್ದೆ ನೀವು ಅನ್ಯಥಾ ತಿಳಿಯ ಬಾರದು ಸುವಾಸಿನಿಯೂ ಲಲಿತೆಯೂ ಹೊನ್ನೂರಿಗೆ ಹೋಗಿ ಬಂದ ಮೇಲೆ ಮದುವೆ ಏರ್ಪಾಟು ಮಾಡೋಣ ವೆಂದಿದ್ದೆ. ಹುಡುಗನಿಗೂ, ವೈಶಾಖದಲ್ಲಿಯೇ ರಜ ಸಿಗುವುದಂತೆ ಅದಕ್ಕಾಗಿ ಮದುವೆ ಮುಂದುವರಿಸಬೇಕಾಯಿತು.

ಸುವಾಸಿನಿ ಹೊನ್ನೂರಿಗೆ ಹೋಗಿಬಂದ ಮೇಲೆ ಪೂರ್ತಿ ಬದಲಾಯಿಸಿಬಿಟ್ಟಿದ್ದಾಳೆ. ಖಾದಿ ಉಡುಪು, ಸದಾ ಗ್ರಾಮಾಭಿವೃದ್ಧಿಯ ಮಾತು. ಅವಳಿಗೆ ಮದುವೆಯೇ ಬೇಡವಂತೆ. ಜೀವಮಾನವನ್ನೆಲ್ಲಾ ಗ್ರಾಮಸೇವೆಯಲ್ಲೇ ಕಳೆಯುವುದಾಗಿಯೂ ಹೇಳುತ್ತಾಳೆ. ಒಂದೇ ಹಠ ಅವಳದು. ಅವಳ ನಿಜವಾದ ಆಸೆ ಏನೆಂಬುದು ತಿಳಿಯಬೇಕೆಂದು ಕೇಳಿದ್ದಕ್ಕೆ "ಮದುವೆಯಾದರೆ ರಾಜನನ್ನು ಹೊರತು ಮತ್ತೆ ಯಾರನ್ನೂ ಮದುವೆಯಾಗುವುದಿಲ್ಲ." ಎಂದುಬಿಟ್ಟಳು. ಅವಳ ಮಾತು ಕೇಳಿ ನಮ್ಮಿಬ್ಬರಿಗೂ ಪರಮಾಶ್ಚರ್ಯವಾಯಿತು.

ರಾಜಾರಾಮ ಸುವಾಸಿನೀ ಒಳ್ಳೆ ಜೊತೆ ನನಗೂ ಆಗಲೆನ್ನಿಸಿದೆ. ಅಕ್ಕನೂ ನೀವೂ ಈ ಸಂಬಂಧಕ್ಕೊಪ್ಪಿ ಚಿ|| ರಾಜಾರಾಮನ ಒಪ್ಪಿಗೆ

ಯನ್ನು ಕೇಳಿ ತಿಳಿದು ಬರೆಯಬೇಕೆಂದು ಹೇಳುತ್ತೇನೆ. ನಾನು ಒಂದು ವಾರದೊಳಗಾಗಿ ಹೊನ್ನೂರಿಗೆ ಬರುತ್ತೇನೆ.

ಅಕ್ಕನಿಗೆ ನನ್ನ ನಮಸ್ಕಾರಗಳನ್ನು ಮಕ್ಕಳಿಗೆ ನನ್ನ ಆಶೀರ್ವಾದವನ್ನೂ ತಿಳಿಸುವುದು.

ಇಂತಿ,

ನಿನ್ನ ತಮ್ಮನ. ಮಾಧವರಾವ್.

೪

ಮೈಸೂರು ೧೪—೪—೧೯೩೯

ಚಿ|| ಮಾಧವನಿಗೆ, ಭಾವನ ಅನೇಕ ಆಶೀರ್ವಾದಗಳು, ಉಭಯ ಕುಶಲೋಪರಿ ಸಾಂಪ್ರತ.

ನಿನ್ನ ಪತ್ರ ತಲುಪಿತು. ಬಹಳ ಸಂತೋಷ. ಕೈಗೆ ಬಂದ ಭಾಗ್ಯವನ್ನು ಸುವಾಸಿನಿ ತಿರಸ್ಕರಿಸಬಹುದೆಂದು ನಾನು ಕನಸಿನಲ್ಲಿಯೂ ಕಂಡಿರಲಿಲ್ಲ. ಎಲ್ಲಾ ಭಗವಂತನ ಲೀಲೆ! ರಾಜಣ್ಣನ ಪುಣ್ಯ!

ಸುವಾಸಿನಿ ಹೊನ್ನೂರಿಗೆ ಬಂದು ಒಂದು ವಾರದೊಳಗಾಗಿಯೇ ರಾಜಣ್ಣನೂ ಇಲ್ಲಿಗೆ ಬಂದ. ಒಂದು ತಿಂಗಳಿನ ಬಳಿಕ ಬರಬೇಕಾದವನು ಕೆಲಸ ಮುಗಿದು ಆಗಲೇ ಬಂದಿರುವುದು ವಿಶೇಷವಲ್ಲವೇ? ಅವನೊಡನೆ ಕಾವಶಾಸ್ತ್ರಿಯೂ, ಸುವಾಸಿನಿಯನ್ನೂ ಜೊತೆಗೆ ಸೇರಿಸಿ ಗ್ರಾಮಸೇವೆ ಆರಂಭಿಸಿದರು. ನಮ್ಮ ಗ್ರಾಮದ ಗುರುಗಳ ಪುಣ್ಯವೋ ಏನೋ ಎರಡೇ ವಾರದಲ್ಲಿ ಸುವಾಸಿನಿಯು ಪೂರಾ ಬದಲಾಯಿಸಿಬಿಟ್ಟಳು. ಬರುವಾಗ ಅವಳಲ್ಲಿದ್ದ ಪಟ್ಟಣದ ರೀತಿಯೆಲ್ಲಾ ಗಾಳಿ ಬೀಸಿದಂತೆ ಮಾಯವಾದವು. ಖಾದಿ, ಗ್ರಾಮಸೇವೆಯೆಂದರೆ ತಮಾಷೆಮಾಡಿ ನಗುತ್ತಿದ್ದ ಸುವಾಸಿನಿ ಖಾದಿ ತೊಟ್ಟು ಕೇರಿಗೆ ಹೋಗಿ ಅವರ ಸುಖ ದುಃಖ ದೇಹಾರೋಗ್ಯ, ನೈರ್ಮಲ್ಯ ವಿಚಾರಿಸಲು ಪ್ರಾರಂಭಿಸಿದಳು. ಸುವಾಸಿನಿಗೆ ತುಂಬಾ ಉತ್ಸಾಹ ಇದೆಲ್ಲದರಲ್ಲಿ. ಇಷ್ಟೆ ಅಲ್ಲ: "ಓದುಬಿಟ್ಟು ಗ್ರಾಮಸೇವೆ ಮಾಡುತ್ತೇನೆ" ಎನ್ನುತ್ತಿದ್ದಾಳೆ ಸುವಾಸಿನಿ. ನಾವೆಲ್ಲಾ ತಮಾಷೆ ಮಾತೆಂದು ತಿಳಿದುಕೊಂಡಿದ್ದೆವು.

ಸುವಾಸಿನಿ ಬಂಗಾರವಂಥ ಹುಡುಗಿ. ರೂಪಕ್ಕಿಂತ ಗುಣ, ಗುಣಕ್ಕಿಂತ ರೂಪು ಚೆನ್ನ. ಇಂತಹ ತ್ಯಾಗಬುದ್ಧಿ, ಮೃದುಸ್ವಭಾವವಿರುವ ಸೊಸೆ ಮನೆಗೆ ಬಂದರೆ ನಾನು ಬೇಡವೆನ್ನಲೇ? ತೆರೆದ ಕೈಯಿಂದ ಎನ್ನುತ್ತೇನೆ. ವಿವಾಹ ಮುಹೂರ್ತವನ್ನು ನಿನಗೆ ಒಳ್ಳೆಯದೆಂದು ತೋರುವ ದಿನವೇ ನಿಷ್ಕರ್ಷೆ ಮಾಡು. ನಿನ್ನ ಸೋದರಳಿಯನ ಒಪ್ಪಿಗೆಯನ್ನು ಕೇಳಬೇಕೇನು? ಆ ವಿಷಯವಾಗಿ ಬರೆಯುವುದೇನಿದೆ; ಸುವಾಸಿನಿಯ ಮಾತು ಕೇಳಿದರೇ ಅರ್ಥವಾಗುವುದಿಲ್ಲವೆ. ಇಬ್ಬರೂ ಮದುವೆಯಾಗಿ ದೇಶಸೇವೆಮಾಡಿ ಕೀರ್ತಿ ಪಡೆಯಲಿ, ನೂರು ವರ್ಷ ಬಾಳಿ ಬದುಕಲಿ, ಇದೇ ನಮ್ಮ ಹಾರೈಕೆ. ಎಲ್ಲರಿಗೂ ಆರೋಗ್ಯ ತಿಳಿಸು. ಲಲಿತಾ, ಸುವಾಸಿನಿ, ಇವರಿಗೆ ನನ್ನ ಆಶೀರ್ವಾದಗಳು. ಎಲ್ಲರೂ ಆರೋಗ್ಯತಾನೆ.

ಇತಿ,

ನಿನ್ನ ಪ್ರೀತಿಯ ಭಾವ ವೆಂಕಟರಮಣರಾವ್

೨೫

ಹೊನ್ನೂರು, ೧೭—೩—೧೯೪೮

ಅಮ್ಮಾ,

ನಮಸ್ಕಾರಗಳು. ನಿನ್ನ ಪ್ರೇಮದ ಕಾಗದ ಓದಿ ತುಂಬಾ ಸಂತೋಷವಾಯಿತು. ನನ್ನ ವಿಚಾರವಾಗಿ ಐ. ಸಿ. ಎಸ್. ಕೆಲಸ ತಪ್ಪಿದನಲ್ಲಾ ಎಂದು ಇನ್ನೂ ಕೂಡಾ ಕೊರಗುತ್ತಿರುವೆ ಎಂತಲೇ ತೋರುತ್ತದೆ. ದೇವರದಯೆ ವ್ಯರ್ಥಜೀವನವಾಗಲಿಲ್ಲ ನನ್ನ ಬದುಕು ಸೇವಲ್‌ಮೋಹನ್‌ಸಾಬ್ ಆಗುವ ಸೌಭಾಗ್ಯ ತಪ್ಪಿತು ಅಷ್ಟೆ. ಸಂತೋಷ. ಈಗ ನಾನು ರಾಣಿ. ಹಗಲು ಹೊತ್ತು ಹೇಗೆ ಕಾಲ ಕಳೆಯುತ್ತಿಯೆಂದು ಕೇಳಿದ್ದೀಯ ಸಂಜೆ ಹೊತ್ತಿನಲ್ಲಿ ಟೆನಿಸ್ ಆಡದೆ ಆರೋಗ್ಯ ಕೆಡಬಹುದೆಂದು ಹೆದರುತ್ತೀಯೆ. ನನ್ನ ಆರೋಗ್ಯ ಕೆಟ್ಟಿಲ್ಲ; ಇನ್ನೂ ಉತ್ತಮವಾಗಿದೆ. ಹಗಲು ಹೊತ್ತಿನಲ್ಲಿ ನೂಲುತ್ತೇನೆ. ಒಳ್ಳೆಯ ಪತ್ರಿಕೆ ಪುಸ್ತಕ ಓದುತ್ತೇನೆ. ಈಗಾಗಲೇ ನಾನೇ ತೆಗೆದ ದಾರದಿಂದ ನಿನ್ನ ಅಳಿಯಂದಿರಿಗೆ ಒಂದು ಜೊತೆ ಪಂಚೆ, ಸೋದರತ್ತೆಗೆರಡು ರವಿಕೆ ತುಂಡು, ನನಗೊಂದು ಸೀರೆ ಎಲ್ಲವನ್ನೂ ನೇಯಿಸ್ಕೊಂಡಿದ್ದೇನೆ.

ಮೂರು ಘಂಟೆಯಿಂದ ಐದು ಘಂಟೆಯ ವರೆಗೂ ಮನೆಯ ಮುಂಭಾಗದಲ್ಲಿರುವ ಜಗುಲಿಯ ಮೇಲೆ ಗೌಡರ ಹೆಣ್ಣುಮಕ್ಕಳನ್ನು ಸೇರಿಸಿ ಜಗುಲಿಯ ಪಾಠಶಾಲೆ ನಡೆಸುತ್ತೇನೆ— ಹುಡುಗಿಯರಿಗೆ ಸಂಗೀತ, ಪಾಠ, ಚಿತ್ರ, ಹೊಲಿಗೆ ಕೆಲಸ, ಮುಂತಾದ ವಿಷಯಗಳನ್ನೆಲ್ಲಾ ಕಲಿಸುತ್ತೇನೆ. ಚರಕದ ತರಗತಿಯೂ ಇದೆ. ಅದಕ್ಕೆ ಮಾವನವರು ಹತ್ತು ಚರಕಾ ಕೊಂಡು ಕೊಟ್ಟಿದ್ದಾರೆ. ಸಂಜೆ ಹೊತ್ತಿನಲ್ಲಿ ನಾನೂ ಅವರೂ ಕಾಮಾಕ್ಷಿ, ಮೂವ್ವರೂ ಕೂಡಿ ಮನೆಯ ಹಿತ್ತಲಿನಲ್ಲಿರುವ ತೋಟದ ಕೆಲಸ ಮಾಡುತ್ತೇವೆ. ಎಷ್ಟು ತಮಾಷೆಯಾಗಿರುತ್ತದೆ ಗೊತ್ತೆ! ತೋಟದ ಕೆಲಸ. ರಾತ್ರಿ ಅವರು ಹಿಂದಿ ಹೇಳಿಕೊಡುತ್ತಾರೆ. ಮುಂದಿನ ತಿಂಗಳು ಪ್ರಾಥಮಿಕ ಪರೀಕ್ಷೆಗೆ ಕುಳಿತುಕೊಳ್ಳುತ್ತೇನೆ. ಮಿಕ್ಕ ಹೊತ್ತಿನಲ್ಲಿ ಕೈಲಾದಷ್ಟು ಮನೆಗೆಲಸ ಮಾಡುತ್ತೇನೆ.

[illegible] ನಾನೂ ಅವರೂ ಕೂಡಿ ಹರಿಜನ ಕೇರಿಗಳಿಗೆ ಹೋಗಿ ಅವರಿಗೆ ನಮ್ಮಿಂದಾದ ಸಹಾಯಮಾಡಿ ನಾಲ್ಕು ಬುದ್ಧಿವಾದದ ಮಾತು ಹೇಳಿ ಬರುತ್ತೇವೆ. ಪಾಪ! ಅವರಿಗೆ ಮುಂಜಾನೆಯಿಂದ ಅರ್ಧರಾತ್ರಿವರೆಗೂ ಗ್ರಾಮದ ಕೆಲಸ. ಆಮೇಲೆ ನನಗೆ ಹಿಂದಿ ಹೇಳಿಕೊಡುತ್ತಾರೆ. ನಿದ್ದೆಯಾವರೂ ಮಾಡುತ್ತಾರೋ ಇಲ್ಲವೋ? ಈ ಐದಾರು ತಿಂಗಳೊಳಗಾಗಿ ಹೊನ್ನೂರು ಹೊಸದಾಗಿಬಿಟ್ಟಿದೆ. ನೀನು ಬಂದರೆ ನಿನಗೆ ಈ ಊರಿನ ಗುರುತು ಕೂಡಾ ಸಿಗಲಾರದು; ಅಷ್ಟು ಬದಲಾಯಿಸಿದೆ.

ಈ ಕೆಲಸ ಸಾಲದೆಂಬಂತೆ ಅವರು ಹಿಂದೀ ಶಾಲೆ, ಕೈಗಾರಿಕೆ, ಪಾಠಶಾಲೆ ಬೇರೆ ಸ್ಥಾಪಿಸಿ ನಡೆಸುತ್ತಿದ್ದಾರೆ. ಇಲ್ಲಿ ಸುತ್ತಮುತ್ತಲ ಗ್ರಾಮದ ಎಷ್ಟೋ ಜನ ಬಂದು ಕಲಿಯುತ್ತಿದ್ದಾರೆ. ಪರಸ್ಪರ ಸಹಾಯ ಸಂಘಗಳೇ ಮುಂತಾದ ಹಲವು ಸಂಘಗಳನ್ನು ಸ್ಥಾಪಿಸಿದ್ದಾರೆ. ಇನ್ನು ಮೇಲೆ ಗ್ರಾಮದಿಂದ ಗ್ರಾಮಕ್ಕೆ ಹೋಗಿ ಪ್ರಚಾರ ಕಾರ್ಯವನ್ನು ಕೈಗೊಳ್ಳಬೇಕೆಂದು ಸರಕಾರದಿಂದ ಕೋರಿಕೆ ಬಂದಿದೆ. ಅವರ ಪಾಠಶಾಲೆಗಳಿಗೆ ಪ್ರತಿಯೊಂದಕ್ಕೂ ತಿಂಗಳಿಗೆ ೫೦ ರೂಪಾಯಿ, ನನ್ನ ಪಾಠಶಾಲೆಗೆ ೩೦ ರೂ. ಕೊಡುವುದಾಗಿ ಮಾನ್ಯ ಸರಕಾರದಿಂದ ಪತ್ರ ಬಂದಿದೆ. ಕಾಮಾಕ್ಷಿಯೂ ನಾನೂ, ಪ್ರಾಣಸ್ನೇಹಿತೆಯರಾಗಿಬಿಟ್ಟಿದ್ದೇವೆ. ಅವಳೂ ನನ್ನ ಕಾರ್ಯದಲ್ಲಿ ತುಂಬಾ

